श्रीमदानन्दतीर्थभगवत्पादाचार्यविरचितम्

# अणुभाष्यम्

## एकादशव्याख्यासमलंकृतम्

अनन्तोऽर्थः प्रकटितः त्वयाणौ भाष्यसङ्ग्रहे


...ादकः पं. मदभावि संजीवाचार्यः



...काशनम् - विश्वमध्वमहापरिषत्
उत्तरादिमठः बेङ्गळूरु.

विश्वमध्वमहापरिषत् ग्रन्थमाला - ८५

श्रीमदानन्दतीर्थभगवत्पादाचार्यविरचितम्

# श्रीमदणुभाष्यम्

## एकादशव्याख्यायुतम्

१. श्रीसत्यनाथतीर्थविरचितं अणुभाष्यविवरणम्
२. श्रीराघवेन्द्रतीर्थविरचिता तत्वमञ्जरी
३. श्रीत्रैविक्रमार्यदासविरचिता आनन्दमाला
४. श्रीनृसिंहतीर्थाविरचिता अणुभाष्यभावप्रकाशिका
५. श्रीश्रीनिवासतीर्थविरचिता अणुभाष्यव्याख्या
६. श्रीछलारी शेषाचार्यविरचिता अणुभाष्यतात्पर्यप्रकाशिका
७. श्री नारायणाचार्यविरचिता अणुभाष्यव्याख्या
८. मळगी सुब्रह्मण्याचार्यविरचिता अणुभाष्यकञ्जमालिका
९. श्रीलिङ्गेरी श्रीनिवासाचार्यविरचिता अणुभाष्यव्याख्या
१०. श्रीनाराणयपण्डितविरचितः अणुभाष्यार्थसङ्ग्रहः
११. गूढकर्तृकं व्याख्यानम्



सम्पादकः
विद्वान् मदभावी सञ्जीवाचार्यः

प्रकाशनम्
श्रीमज्जगद्गुरुश्रीमन्मध्वाचार्यमूलमहासंस्थानम्, श्रीमदुत्तरादिमठः
विश्वमध्वमहापरिषत्
बेंगळूरु-४

"**Anubhashyam**" A unique work of Sri Madhwacharya with eleven commentories, edited by Pt. Sanjeevacharya Madabhavi,
**Published by : Vishwa Madhwa Maha Parishath.**

Copies : 1000

First Edition : 2011

No of Pages : 60 + 560



Price : ₹ 300/-

Wrapper Design : Sri Gopalakrishna

Typeset by : Pt. Sanjeevacharya Madabhavi

*Copies can be had from :*

1. **Vishwa Madhwa Mahaparishat**
   Research Centre, #11, 2nd Floor,
   Uttaradimath Building,
   Uttaradi Math Road, Shankarapuram,
   Bangalore-560 004. Phone : 080-26603692

2. **Jayateertha Vidyapeetha**
   Sri Uttaradi Math, Shankarapuram,
   5th Cross, Basavanagudi
   Bangalore-560 004. Phone : 080-26526203

Printed at : Vagartha, N.R. Colony, Bangalore-19. vagartha@yahoo.com

॥ श्रीदिग्विजयरामो विजयते ॥

श्रीमज्जगद्गुरुश्रीमध्वाचार्यमूलमहासंस्थानम्

# उ त्त रा दि म ठः

5th Cross, Shankarpuram, Basavanagudi BANGALORE - 560 004, Ph : 080 - 2242 6203

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

**ಶ್ರೀ ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ**

## ಅನುಗ್ರಹ ಸಂದೇಶ

'ಅನಂತೋಽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ' ಎಂಬ ಶ್ರೀನಾರಾಯಣಪಂಡಿತಾಚಾರ್ಯರ ಹೇಳಿಕೆಯಂತೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಅಣುಭಾಷ್ಯವೆಂಬ ಚಿಕ್ಕ ಕೃತಿಯಲ್ಲಿ ವೈದಿಕಸರ್ವಶಾಖಾ ನಿರ್ಣಾಯಕವಾದ ಬ್ರಹ್ಮಸೂತ್ರಗಳಲ್ಲಿ ಅಡಗಿದ ಅನಂತ ಅರ್ಥಗಳನ್ನು ಸಂಗ್ರಹರೂಪವಾಗಿ ತಿಳಿಸಿದ್ದಾರೆ. ಅಂತಹ ಶ್ರೀಮದಾಚಾರ್ಯರ ಗಂಭೀರವಾದ ಅಣುಭಾಷ್ಯದ ಭಾವವನ್ನು ವ್ಯಾಖ್ಯಾನಗಳ ಸಹಾಯವಿಲ್ಲದೆ ತಿಳಿಯುವುದಕ್ಕೆ ಸಾಧ್ಯವಿಲ್ಲ. ಇಂತಹ ಗೂಢಾರ್ಥವನ್ನು ತಿಳಿಸಿಕೊಡುವುದಕ್ಕೆ ಅನೇಕ ಮಹನೀಯರಾದ ಶ್ರೀಸತ್ಯನಾಥತೀರ್ಥರು, ಶ್ರೀರಾಘವೇಂದ್ರಸ್ವಾಮಿಗಳು, ಶ್ರೀಛಲಾರೀ ಆಚಾರ್ಯರು ಇವರೇ ಮೊದಲಾದ ಜ್ಞಾನಿವರೇಣ್ಯರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ನಮ್ಮ ಗುರುಗಳ ಸಂಗ್ರಹದಲ್ಲಿ ಸುಮಾರು ಹತ್ತು ವ್ಯಾಖ್ಯಾನಗಳು ಉಪಲಬ್ಧವಾಗಿವೆ. ಅವುಗಳನ್ನು ವಿದ್ವಾಂಸರ ಹಾಗು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶನ ಮಾಡುತ್ತಿದ್ದೇವೆ.

ಈ ಒಂದು ಬೃಹತ್ತಾದ ಗ್ರಂಥದ ಸಂಶೋಧನೆ ಹಾಗು ಸಂಪಾದನೆಯ ಜವಾಬ್ದಾರಿಯನ್ನು ನಮ್ಮ ಪ್ರಿಯ ಶಿಷ್ಯರಾದ ಪಂ. ಸಂಜೀವಾಚಾರ್ಯ ಮಧಬಾವಿ ಇವರು ನಿರ್ವಹಿಸಿದ್ದಾರೆ. ಜೀರ್ಣಾವಸ್ಥೆಯಲ್ಲಿರುವ ಹಸ್ತಪ್ರತಿಗಳನ್ನು ಬಹಳ ಪರಿಶ್ರಮಪೂರ್ವಕವಾಗಿ ತಾವೇ ಸ್ವತಃ ಸಂಶೋಧಿಸಿ ಅಕ್ಷರ ಜೋಡನೆಯನ್ನು ಮಾಡಿ ಸಂಪಾದನೆ ಮತ್ತು ಕನ್ನಡ ಭಾವಾನುವಾದವನ್ನೂ ಕೂಡ ಮಾಡಿದ್ದಾರೆ. ಸತ್ಯಧ್ಯಾನವಿದ್ಯಾಪೀಠದಲ್ಲಿ ಅಧ್ಯಯನ ಮಾಡಿ ವಿಜಾಪುರದ ಸರ್ವಜ್ಞ ವಿಹಾರ ವಿದ್ಯಾಪೀಠದಲ್ಲಿ ವಿದ್ಯಾರ್ಥಿಗಳಿಗೆ ಶಾಸ್ತ್ರಗ್ರಂಥಗಳ ಪಾಠಗಳನ್ನು ಹೇಳುತ್ತಿರುವ ಪಂ. ಸಂಜೀವಾಚಾರ್ಯ ಮಧಭಾವಿ ಅವರಿಗೆ ನಮ್ಮ ಉಪಾಸ್ಯಮೂರ್ತಿ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರು ಜ್ಞಾನಭಕ್ತಿ ವೈರಾಗ್ಯಾದಿಗಳನ್ನು ಕೊಟ್ಟು ಇದೇ ತರಹದ ಸೇವೆಯನ್ನು ಇವರಿಂದ ಮಾಡಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ಅನೇಕ ನಾರಾಯಣ ಸ್ಮರಣೆಗಳೊಂದಿಗೆ

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಶ್ರೀ ಉತ್ತರಾದಿ ಮಠ.

"**Anubhashyam**" A unique work of Sri Madhwacharya with eleven commentories,
edited by Pt. Sanjeevacharya Madabhavi,
Published by : Vishwa Madhwa Maha Parishath.

Copies : 1000

First Edition : 2011

No of Pages : 60 + 560



Price : ₹ 300/-

Wrapper Design : Sri Gopalakrishna

Typeset by : Pt. Sanjeevacharya Madabhavi

*Copies can be had from :*

1. **Vishwa Madhwa Mahaparishat**
   Research Centre, #11, 2nd Floor,
   Uttaradimath Building,
   Uttaradi Math Road, Shankarapuram,
   Bangalore-560 004. Phone : 080-26603692

2. **Jayateertha Vidyapeetha**
   Sri Uttaradi Math, Shankarapuram,
   5th Cross, Basavanagudi
   Bangalore-560 004. Phone : 080-26526203

Printed at : Vagartha, N.R. Colony, Bangalore-19. vagartha@yahoo.com

॥ श्रीदिग्विजयरामो विजयते ॥

## श्रीमज्जगद्गुरुश्रीमध्वाचार्यमूलमहासंस्थानम्

# उ त्त रा दि म ठः

5th Cross, Shankarpuram, Basavanagudi BANGALORE - 560 004, Ph : 080 - 2242 6203

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

**ಶ್ರೀ ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ**

## ಅನುಗ್ರಹ ಸಂದೇಶ

'ಅನಂತೋಽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ' ಎಂಬ ಶ್ರೀನಾರಾಯಣಪಂಡಿತಾಚಾರ್ಯರ ಹೇಳಿಕೆಯಂತೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಅಣುಭಾಷ್ಯವೆಂಬ ಚಿಕ್ಕ ಕೃತಿಯಲ್ಲಿ ವೈದಿಕಸರ್ವಶಾಖಾ ನಿರ್ಣಾಯಕವಾದ ಬ್ರಹ್ಮಸೂತ್ರಗಳಲ್ಲಿ ಅಡಗಿದ ಅನಂತ ಅರ್ಥಗಳನ್ನು ಸಂಗ್ರಹರೂಪವಾಗಿ ತಿಳಿಸಿದ್ದಾರೆ. ಅಂತಹ ಶ್ರೀಮದಾಚಾರ್ಯರ ಗಂಭೀರವಾದ ಅಣುಭಾಷ್ಯದ ಭಾವವನ್ನು ವ್ಯಾಖ್ಯಾನಗಳ ಸಹಾಯವಿಲ್ಲದೆ ತಿಳಿಯುವುದಕ್ಕೆ ಸಾಧ್ಯವಿಲ್ಲ. ಇಂತಹ ಗೂಢಾರ್ಥವನ್ನು ತಿಳಿಸಿಕೊಡುವುದಕ್ಕೆ ಅನೇಕ ಮಹನೀಯರಾದ ಶ್ರೀಸತ್ಯನಾಥತೀರ್ಥರು, ಶ್ರೀರಾಘವೇಂದ್ರಸ್ವಾಮಿಗಳು, ಶ್ರೀಛಲಾರೀ ಆಚಾರ್ಯರು ಇವರೇ ಮೊದಲಾದ ಜ್ಞಾನಿವರೇಣ್ಯರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ನಮ್ಮ ಗುರುಗಳ ಸಂಗ್ರಹದಲ್ಲಿ ಸುಮಾರು ಹತ್ತು ವ್ಯಾಖ್ಯಾನಗಳು ಉಪಲಬ್ಧವಾಗಿವೆ. ಅವುಗಳನ್ನು ವಿದ್ವಾಂಸರ ಹಾಗು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶನ ಮಾಡುತ್ತಿದ್ದೇವೆ.

ಈ ಒಂದು ಬೃಹತ್ತಾದ ಗ್ರಂಥದ ಸಂಶೋಧನೆ ಹಾಗು ಸಂಪಾದನೆಯ ಜವಾಬ್ದಾರಿಯನ್ನು ನಮ್ಮ ಪ್ರಿಯ ಶಿಷ್ಯರಾದ ಪಂ. ಸಂಜೀವಾಚಾರ್ಯ ಮಧಬಾವಿ ಇವರು ನಿರ್ವಹಿಸಿದ್ದಾರೆ. ಜೀರ್ಣಾವಸ್ಥೆಯಲ್ಲಿರುವ ಹಸ್ತಪ್ರತಿಗಳನ್ನು ಬಹಳ ಪರಿಶ್ರಮಪೂರ್ವಕವಾಗಿ ತಾವೇ ಸ್ವತಃ ಸಂಶೋಧಿಸಿ ಅಕ್ಷರ ಜೋಡನೆಯನ್ನು ಮಾಡಿ ಸಂಪಾದನೆ ಮತ್ತು ಕನ್ನಡ ಭಾವಾನುವಾದವನ್ನೂ ಕೂಡ ಮಾಡಿದ್ದಾರೆ. ಸತ್ಯಧ್ಯಾನವಿದ್ಯಾಪೀಠದಲ್ಲಿ ಅಧ್ಯಯನ ಮಾಡಿ ವಿಜಾಪುರದ ಸರ್ವಜ್ಞ ವಿಹಾರ ವಿದ್ಯಾಪೀಠದಲ್ಲಿ ವಿದ್ಯಾರ್ಥಿಗಳಿಗೆ ಶಾಸ್ತ್ರಗ್ರಂಥಗಳ ಪಾಠಗಳನ್ನು ಹೇಳುತ್ತಿರುವ ಪಂ. ಸಂಜೀವಾಚಾರ್ಯ ಮಧಭಾವಿ ಅವರಿಗೆ ನಮ್ಮ ಉಪಾಸ್ಯಮೂರ್ತಿ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರು ಜ್ಞಾನಭಕ್ತಿ ವೈರಾಗ್ಯಾದಿಗಳನ್ನು ಕೊಟ್ಟು ಇದೇ ತರಹದ ಸೇವೆಯನ್ನು ಇವರಿಂದ ಮಾಡಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ಅನೇಕ ನಾರಾಯಣ ಸ್ಮರಣೆಗಳೊಂದಿಗೆ

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಶ್ರೀ ಉತ್ತರಾದಿ ಮಠ.

॥ ಶ್ರೀಮನ್ನಾರಾಯಣ ಏವ ಶರಣಮ್ ॥
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ಗುರುಭ್ಯೋ ನಮಃ
ಸಮಸ್ತದೇವತಾಗುರುಭ್ಯೋ ನಮಃ
ಶ್ರೀಸತ್ಯಾತ್ಮತೀರ್ಥಗುರುಭ್ಯೋ ನಮಃ
ಅಸ್ಮದಾರಾಧ್ಯಗುರುಭ್ಯೋ ನಮಃ

# ಆಶೀರ್ವಾದ

ಅನಂತವೇದಗಳ ಹಾಗೂ ಅಪಾರಪೌರುಷೇಯಗ್ರಂಥಗಳ ತತ್ವರತ್ನಗಳನ್ನೆಲ್ಲ ತಮ್ಮ ಅತಿಪುಟ್ಟ ಸೂತ್ರಗಳಲ್ಲಿ ನಿರ್ಣಯಿಸಿ ಹೆಣೆದು ಹದಿನಾಲ್ಕು ಭುವನಗಳಲ್ಲಿ ಬೆಳಗುವಂತೆ ಮಾಡಿ ವಿಧಿ ವಾಯುವಾಣೀ ಭಾರತೀಶೇಷವೀಶಶಿವಾದಿ ಅಮರರಿಗೂ ಜ್ಞಾನವನ್ನು ದಯಪಾಲಿಸಿದವರು ಸರ್ವವಾಗೀಶ್ವರೇಶ್ವರ ಸರ್ವವಿದ್ಯಾಧಿಪತಿ ಭಗವಾನ್ ಬಾದರಾಯಣರು.

ಭಗವಾನ್ ಬಾದರಾಯಣರು ಬರೆದ ಸಂಕ್ಷಿಪ್ತಸೂತ್ರಗಳಲ್ಲಿ ಇಡಿಯ ತಾತ್ವಿಕವಿಶ್ವ ತುಂಬಿದೆ. ಸೂತ್ರದಲ್ಲಿ ಅಡಕವಾದ ತತ್ವವಿಸ್ತಾರವನ್ನು ಜಗತ್ತಿಗೆ ಅರುಹಿದ ಸರ್ವಜ್ಞಾಚಾರ್ಯರೇ ಶ್ರೀಮನ್ಮಧ್ವಾಚಾರ್ಯರು. ಭಗವಾನ್ ವೇದವ್ಯಾಸದೇವರ ನಿಜವಾದ ಹೃದಯವನ್ನು ತಿಳಿದ ವಿಶ್ವಗುರುಗಳು.

ಸಮಸ್ತದೇವತಾಶಿಖಾಮಣಿಗಳಿಗೆ ಗುರುವಾದ ಶ್ರೀಮದಾನಂದತೀರ್ಥರು ಎಲ್ಲ ಸೂತ್ರಗಳ ಸಾರವನ್ನು ವಿವರವಾಗಿ ತಮ್ಮ ಶ್ರೀಮದ್ಭಾಷ್ಯದಲ್ಲಿ ಉಪದೇಶಿಸಿದ್ದಾರೆ. ಸೂತ್ರಾರ್ಥಗಳನ್ನು ಶ್ರುತಿಸ್ಮೃತಿಗಳ ಆಧಾರದಿಂದ ಸಮರ್ಥಿಸಿದ್ದಾರೆ. ಇಡಿಯ ವಿಶ್ವದ ವಾಙ್ಮಯದಲ್ಲೇ ಅತ್ಯದ್ಭುತವೆನಿಸುವ ಕೃತಿ ಶ್ರೀಮದಾಚಾರ್ಯರ ಭಾಷ್ಯ.

ಸಾಮಾನ್ಯ ಮಂದಮತಿಗಳಿಗೂ ತಿಳಿಯಬಹುದಾದ, ವಿದ್ವತ್ಸಾರ್ವಭೌಮರಿಗೂ ಗಹನವಾಗಿ ತೋರುವ ಶೈಲಿ ಈ ಭಾಷ್ಯದಲ್ಲಿದೆ. ಇಂಥ ಭಾಷ್ಯದ ಪುಟ್ಟಸಂಗ್ರಹವೇ ಅಣುಭಾಷ್ಯ. ಗಾತ್ರದಲ್ಲಿ ಚಿಕ್ಕದಾದರೂ ಚೊಕ್ಕಾಗಿ ಸಮಸ್ತ ತತ್ವಗಳನ್ನು ಬಿಡದೆ ನಿರೂಪಿಸುವ ಸರ್ವೋತ್ತಮ ಗ್ರಂಥ.

ಪ್ರಾಯಃ ಜಗತ್ತಿನಲ್ಲೇ ಈ ತೆರನಾದ ಗ್ರಂಥ ಮತ್ತೊಂದು ಇರಲು ಸಾಧ್ಯವಿಲ್ಲ. ಇತರರು ಸಾವಿರಾರು ಮಾತುಗಳಲ್ಲಿ ಹೇಳಬಹುದಾದ ತತ್ವಗಳನ್ನೆಲ್ಲ ಕೇವಲ ಒಂದೊಂದು ಶಬ್ದಗಳಲ್ಲಿ ನಿರೂಪಿಸುವ ಭಾರತೀರಮಣರಾದ ಆಚಾರ್ಯರ ಕೌಶಲ ಇನ್ನಾರಲ್ಲೂ ಕಾಣಲು ಸಿಗದು.

ಇದನ್ನು ವ್ಯಾಖ್ಯಾನಿಸಲು ತೊಡಗಿದ ಎಲ್ಲ ಮಹಾಮೇಧಾವಿಗಳು ಅಲ್ಲಿ ನಿರೂಪಿತವಾದ ತತ್ವಗಳನ್ನು ವಿವರಿಸುವಲ್ಲಿ ಮಹಾಶ್ರಮವನ್ನು ವಹಿಸಿದ್ದು ಕಾಣುತ್ತೇವೆ. ಒಂದೊಂದು ಮಾತನ್ನು ವ್ಯಾಖ್ಯಾನಿಸಲು, ವಿವರಿಸಲು ಟಿಪ್ಪಣೀಕಾರರು ಪಟ್ಟ ಶ್ರಮ ಅಸಾಧಾರಣ.

ಗಾತ್ರದಲ್ಲಿ ಚಿಕ್ಕದಾದರೂ ಈ ಕೃತಿಯನ್ನು ಅತಿಮಹಾಗ್ರಂಥಕಾರರಾದ ಶ್ರೀ ಜಯತೀರ್ಥರು, ಶ್ರೀವ್ಯಾಸರಾಜರು ಮುಂತಾದವರೂ ಪರಿಪೂರ್ಣವಾದ ಆದರದಿಂದ ಪರಾಮರ್ಶಿಸುವದನ್ನು ಕಾಣುತ್ತೇವೆ. ಹಾಗೂ ವಾದ ವಿವಾದದ ಸಂದರ್ಭದಲ್ಲಿ ಮೂಡಿಬಂದ ಸಂಶಯಗಳನ್ನು ಪರಿಹರಿಸಲು ಈ ಗ್ರಂಥದ ಅತಿಪುಟ್ಟ ಒಂದೊಂದು ಶಬ್ದಗಳಿಂದ ಅತಿಮಹೋಪಕಾರವನ್ನು ಪಡೆಯುತ್ತಾರೆ.

ಇಂಥ ಈ ಶ್ರೀಮದಣುಭಾಷ್ಯ ಹಾಗೂ ಅವುಗಳ ಪ್ರಾಚೀನ ಅರ್ವಾಚೀನ ಎಲ್ಲ ಟಿಪ್ಪಣಿಗಳು ನಮ್ಮೆಲ್ಲರಿಗೆ ಜ್ಞಾನವನ್ನು ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ಗ್ರಂಥವನ್ನು ೧೧ ಟಿಪ್ಪಣಿಗಳೊಡನೆ ಸಂಶೋಧನೆ ಮಾಡಿಸಿ ಪ್ರಕಾಶಿಸಿ ಪರಮಾನುಗ್ರಹಗೈದ ವಿದ್ವತ್ ಚಕ್ರವರ್ತಿಗಳಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ ಪಾದಾರವಿಂದಗಳಿಗೆ ಕೃತಜ್ಞತಾಪೂರ್ವಕ ಅನಂತಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಶ್ರೀ ಶ್ರೀಗಳವರ ಆಜ್ಞಾನುಸಾರ ಅವರನುಗ್ರಹದ ಬಲದಿಂದ ಬಲುಪರಿಶ್ರಮದಿಂದ ಪರಿಶೋಧಿಸಿ, ಆಕರಗಳನ್ನು ಗುರುತಿಸಿ ತುಂಬ ಸುಂದರವಾಗಿ ಹಾಗೂ ಸಮರ್ಪಕವಾಗಿ ಸಂಶೋಧಿಸಿ ಸೇವೆ ಸಲ್ಲಿಸಿದ ನಮ್ಮ ಪ್ರೀತಿಯ ಶಿಷ್ಯ ಪಂಡಿತ ಮದಭಾವಿ ಸಂಜೀವಾಚಾರ್ಯರಿಗೆ ನಮ್ಮ ಗುರುಗಳು, ಶ್ರೀ ಸತ್ಯಾತ್ಮತೀರ್ಥರು, ಶ್ರೀಸತ್ಯಪ್ರಮೋದತೀರ್ಥರು ಎಲ್ಲ ಟಿಪ್ಪಣೀಕಾರರು, ಶ್ರೀಮದಾನಂದ ತೀರ್ಥರು ತದಂತರ್ಯಾಮಿ ಭಗವಾನ್ ವೇದವ್ಯಾಸದೇವರು ಪರಮಾನುಗ್ರಹಗೈದು ವಿಶೇಷವಾದ ಜ್ಞಾನಭಕ್ತಿವೈರಾಗ್ಯಗಳನ್ನು ಕರುಣಿಸಲೆಂದು ಅನನ್ಯವಾಗಿ ಪ್ರಾರ್ಥಿಸುತ್ತೇನೆ.

ಬ್ರಹ್ಮಾತ್ಮದಾಸ,

ಪರಮಪೂಜ್ಯಮಾಹುಲೀಗೋಪಾಲಾಚಾರ್ಯಪಾದಪದ್ಮಾರಾಧಕ

ಮಾಹುಲೀ ವಿದ್ಯಾಸಿಂಹಾಚಾರ್ಯ

ಶ್ರೀಮನ್ನಾರಾಯಣ ಏವ ಶರಣಂ

# ಆಶಯ

ಅಕ್ಷರಅಧಿಗತಿಕರಣತ್ವರೂಪ ವೇದೋಕ್ತ್ಯಯುಕ್ತಿಯಿಂದ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವನ್ನು ನಿರೂಪಿಸಿದ್ದಾರೆ. ಅಂದರೆ ಬ್ರಹ್ಮಸೂತ್ರಗಳು ವೇದಾರ್ಥನಿರ್ಣಾಯಕವಾಗಿ ಸರ್ವಶ್ರೇಷ್ಠಜ್ಞಾನಸಾಧನಗಳಾಗಿವೆ. ಅಂತೆಯೇ ಇವುಗಳ ಆಳ ಅಧ್ಯಯನವಿಲ್ಲದೆ ವೇದೇತಿಹಾಸಪುರಾಣಗಳ ನಿಜವಾದ ಅರ್ಥವಾಗುವುದೇ ಇಲ್ಲ. 'ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಾಸ್ಸರ್ವನಿರ್ಣಯಾಃ' ಎಂದು ನಿರ್ಣಯವಚನವು ಇದನ್ನೇ ಒತ್ತಿ ಹೇಳಿದೆ. ಶ್ರೀನಾರಾಯಣನು ಸರ್ವೋತ್ತಮಪ್ರಮೇಯನಾದರೆ ಇದನ್ನು ನಿರ್ಣಯಿಸುವ ಸರ್ವೋತ್ತಮಪ್ರಮಾಣವು ಬ್ರಹ್ಮಸೂತ್ರವಾಗಿದೆ. 'ಚಕ್ರೇ ಶಾಸ್ತ್ರಮನುತ್ತಮಮ್' ದೇವರ ಅಣುರೂಪದಲ್ಲಿ ಮಹದ್ರೂಪವಿದ್ದಂತೆ ಈ ಅಣುರೂಪ ಅಣುಭಾಷ್ಯದಲ್ಲಿ ಆಚಾರ್ಯರ ಮಹದ್ವಾಣಿಯು ಜ್ಞಾನಿಗಳಿಗೆ ತೋರಿದೆ. ಇದರ ಮೂಲರೂಪವು ಎರಡು ಮೂರು ಪುಟದಷ್ಟು ಇದ್ದರೆ ಇದರ ವಿಸ್ತೃತ ಟೀಕಾ, ಟಿಪ್ಪಣೀ ಸಾಹಿತ್ಯವು ಎಷ್ಟೋ ಪಟ್ಟು ಬೆಳೆದಿದೆ. ಇದಕ್ಕೆ ಸಾಕ್ಷಿಯಂತೆ ಈ ಗ್ರಂಥವು ಪ್ರಕಟವಾಗಿದೆ.

ಇಲ್ಲಿಯವರೆಗೆ ಈ ಗ್ರಂಥದ ವಿಸ್ತೃತವ್ಯಾಖ್ಯಾನವನ್ನು ಅಭ್ಯಸಿಸುವವರಿಗೆ ಹೆಚ್ಚಾಗಿ ಆನಂದಮಾಲಾ ಹಾಗೂ ತತ್ತ್ವಮಂಜರೀಗಳ ಪರಿಚಯವಿದ್ದಿತು. ಆದರೆ ಇನ್ನೂ ಅನೇಕವಿಮರ್ಶಾತ್ಮಕ ಟೀಕೆಗಳು ಇರುವುದು ಈಗ ನಮಗೆ ಸ್ಫುಟವಾಗಿ ಕಂಡಿದೆ. ಅತ್ಯಂತ ವಿಸ್ತೃತವಾದದ್ದನ್ನು ಸಂಕ್ಷೇಪಿಸುವ ಸಂಕ್ಷಿಪ್ತವಾದದ್ದನ್ನು ವಿಸ್ತರಿಸುವ ಶ್ರೀಮದಾಚಾರ್ಯರ ಈ ಮಹಾಶಕ್ತಿಯು ಅವರ ಪ್ರತಿಬಿಂಬರಾದ ಈ ಟಿಪ್ಪಣಿಕಾರರಲ್ಲಿಯೂ ಯಥಾಯೋಗ್ಯ ಪ್ರತಿಬಿಂಬಿತವಾದದ್ದನ್ನು ನಾವು ಇಲ್ಲಿ ಅಧ್ಯಯನಮೂಲಕ ಅನುಭವಿಸಿ ಆನಂದ ಪಡಬೇಕಾಗಿದೆ. ಹಿಂದಿನ ಇಂದಿನ ಮಹಾಸ್ವಾಮಿಗಳ ಗವೇಷಣಾಪ್ರವೃತ್ತಿಯಿಂದ ಉಪಲಬ್ಧವಾದ ಈ ಅಪರೂಪ ಹಸ್ತಪ್ರತಿಗ್ರಂಥಗಳು ಇದೀಗ ಸಂಕಲಿತ ಮುದ್ರಿತ ಬೃಹತ್‌ಗ್ರಂಥರೂಪದಲ್ಲಿ ಹೊರಹೊಮ್ಮುತ್ತಿರುವದು ನಮ್ಮೆಲ್ಲ ಭಾಗ್ಯವೇ ಸರಿ.

ತರುಣ ವಿದ್ವಾಂಸರಾದ ಪಂ.ಸಂಜೀವಾಚಾರ್ಯ ಮದಭಾವಿ ಇವರು ಶ್ರೀಗಳವರ ಆಜ್ಞೆ ಹಾಗೂ ಅನುಗ್ರಹದಿಂದ ತಮ್ಮ ನಿಶಿತಮತಿಯಿಂದ ಪರಿಶ್ರಮಪೂರ್ವಕ ಪರಿಶೋಧಿಸಿದ ಈ ಗ್ರಂಥ ಅತ್ಯಂತ ಉಪಯುಕ್ತವಾಗಿದೆ. ವಿಶೇಷ ಅಧ್ಯಯನಮಾಡುವವರಿಗಂತೂ ಸಹಾಯಕವಾಗಿದೆ. ಶ್ರೀಗಳವರ ಈ ಪರಮಾನುಗ್ರಹದ ಕೊಡುಗೆಯು ಸಂಪಾದಕರ ಪರಿಶ್ರಮವು ಸಾರ್ಥಕವಾಗಬೇಕಾದರೆ ಪಾಠಪ್ರವಚನ ಮಾಡುವ ಎಲ್ಲ ಹಿರಿಯ ಕಿರಿಯ ವಿದ್ವಾಂಸವರ್ಗವು ಈ ಗ್ರಂಥವನ್ನು ತಮ್ಮ ವಿಶೇಷ ಅಧ್ಯಯನಕ್ರಿಯೆಗೆ ಗುರಿಪಡಿಸಿದರೆ ಸಾರ್ಥಕವಾಗುವದು.

ಪಂ.ಮಧ್ವಾಚಾರ್ಯ ಮೊಖಾಶಿ
ಸರ್ವಜ್ಞವಿಹಾರವಿದ್ಯಾಪೀಠ
ವಿಜಾಪೂರ

ಶ್ರೀಶಃ ಶರಣಮ್
ಸಮಸ್ತಗುರುದೇವತಾಭ್ಯೋ ನಮಃ

# ಪ್ರಸ್ತಾವನೆ

ಬಂಧುಸ್ತ್ವಂ ಗುರುರಿಷ್ಟದೈವತಮಿತಿ ತ್ವತ್ಪಾದಪಂಕೇರುಹಂ
ಪ್ರಾಪ್ತಂ ಮಾಂ ಪರಿಪಾಲಯೇತಿ ಸತತಂ ಯಾಚೆ ನಿಬದ್ಧಾಂಜಲಿಃ ।
ಚಿತ್ತಂ ಮದ್ಗುಣದೋಷಚಿಂತನವಿಧೌ ನೂನಂ ಮನಾಕ್ ಮಾ ಕೃಥಾಃ
ಶ್ರೀಸತ್ಯಾತ್ಮಗುರೋ ತ್ವದಂಘ್ರಿಯುಗಲಂ ಹಿತ್ವಾ ನ ಮೇ ಸದ್ಗತಿಃ ॥

ಪರತತ್ತ್ವನಾದ ಪರಮಾತ್ಮನ ಜ್ಞಾನ ಪರಮಪದ ಮುಕ್ತಿಗೆ ಕಾರಣ. ಆ ಜ್ಞಾನ ಪರಮಾತ್ಮನನ್ನು ಬಲ್ಲವರು ಕೊಡಬೇಕು. ಅನಂತ ದೇಶದಲ್ಲಿ ವ್ಯಾಪಿಸಿದ ಅನಂತಗುಣಗಳಿಂದ ಪೂರ್ಣನಾದ ದೇವರನ್ನು ಪೂರ್ಣವಾಗಿ ತಿಳಿದವನು ದೇವರು ಮಾತ್ರ. ತನ್ನನ್ನು ತಿಳಿಸಲೆಂದೇ ದೇವರು ವೇದವ್ಯಾಸನಾಗಿ ಭೂಮಿಗೆ ಬಂದ. ವೇದಗಳನ್ನು ವಿಭಾಗಿಸಿದ. ಮನುಷ್ಯರಿಗೆ ಜೀರ್ಣವಾಗುವಷ್ಟು ಮಾತ್ರ ಕೊಟ್ಟ ವೇದಾರ್ಥವನ್ನು ತಿಳಿಸುವದಕ್ಕೆ ಪುರಾಣ, ಮಹಾಭಾರತ, ಸೂತ್ರಗಳನ್ನು ರಚಿಸಿದ.

ಇಷ್ಟೆಲ್ಲ ದೊರೆತರೂ ದೇವರ ಜ್ಞಾನ ಮಾತ್ರ ದೊರೆಯಲಿಲ್ಲ, ಕಾರಣ ವೇದವ್ಯಾಸರ ಸೂತ್ರಗಳಿಗೆ ಅನೇಕರು ವ್ಯಾಖ್ಯಾನ ಬರೆದರು. ಗೀತೆಯ ಅರ್ಥವೆಂದು ತಮ್ಮ ಮನಸ್ಸಿಗೆ ಬಂದದ್ದನ್ನು ವ್ಯಾಖ್ಯಾನದ ರೂಪದಲ್ಲಿ ಗೀಚಿದರು. ವ್ಯಾಖ್ಯಾನದ ಬೆಳಕಿನಲ್ಲಿ ವೇದವ್ಯಾಸರ ಭಾವ ತಿಳಿಯ ಹೊರಟ ಪಾಮರರಿಗೆ ಮತ್ತೆ ನಿರಾಸೆಯಾಯಿತು.

ಆಗ ಪಾರಾಶರರ ಪಾರಮ್ಯ ಹೇಳಲು ಬಂದ ಪರಮಗುರುಗಳೇ ಪೂರ್ಣಪ್ರಜ್ಞರು. ವೇದದ ಭಾವ ತಿಳಿಸಲು ಋಗ್ಭಾಷ್ಯ, ಉಪನಿಷದ್ಭಾಷ್ಯ, ಕರ್ಮನಿರ್ಣಯ ಮೊದಲಾದವುಗಳನ್ನು ರಚಿಸಿದರು. ಪುರಾಣಗಳ ಅರ್ಥ ತಿಳಿಸುವದಕ್ಕೆ ಮಹಾಭಾರತ ತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ ಮೊದಲಾದವುಗಳನ್ನು ಬರೆದರು. ಗೀತಾರ್ಥವನ್ನು ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯಗಳಿಂದ ತಿಳಿಸಿದರು. ಸೂತ್ರಗಳ ಅರ್ಥವನ್ನು ತಿಳಿಸುವದಕ್ಕೆ ಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ ಹಾಗೂ ಅಣುಭಾಷ್ಯಗಳನ್ನು ಬರೆದರು.

ಶ್ರೀಮದಾಚಾರ್ಯರು ಸೂತ್ರಭಾಷ್ಯದಲ್ಲಿ ಪೂರ್ವಪಕ್ಷಗಳನ್ನು ಹೇಳಿ ಸಿದ್ಧಾಂತವನ್ನು ಆಗಮ-ಅನುಮಾನಗಳಿಂದ ದೃಢಪಡಿಸಿದ್ದಾರೆ. ಸೂತ್ರಭಾಷ್ಯದ ಮೇಲೆ ಬರುವ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡುವದಕ್ಕಾಗಿ ಅನುವ್ಯಾಖ್ಯಾನ ರಚಿಸಿದರು. ಪ್ರತಿಸೂತ್ರಗಳಿಗೆ ಸಂಬಂಧಿಸಿದ ಪೂರ್ವಪಕ್ಷ ಅದಕ್ಕೆ ಪೂರಕವಾದ ಯುಕ್ತಿ ಸಿದ್ಧಾಂತ ಹಾಗೂ ಅದನ್ನು ಸಾಧಿಸುವ ಯುಕ್ತಿಸಂಗ್ರಹ ನ್ಯಾಯವಿವರಣದಲ್ಲಿ ಮಾಡಿದರು. ಸೂತ್ರಗಳ ಸಾರಾಂಶ ತಿಳಿಸುವದಕ್ಕೆ ಅಣುಭಾಷ್ಯ ರಚಿಸಿದರು.

ಇದು ಸೂತ್ರಭಾಷ್ಯದ ಸಂಕ್ಷೇಪ ಆದ್ದರಿಂದ ಅಣುಭಾಷ್ಯ. ಭಾಷ್ಯಾನುಸಾರಿಯಾದ್ದರಿಂದ ಅನುಭಾಷ್ಯವೂ ಹೌದು.

### ಅಣುಭಾಷ್ಯದ ರಚನೆಯ ಹಿನ್ನಲೆ

ಶ್ರೀಮದಾಚಾರ್ಯರಿಗೆ ಅನೇಕ ಗೃಹಸ್ಥ ಹಾಗೂ ಸನ್ಯಾಸಿ ಶಿಷ್ಯಂದಿರು ಇದ್ದರು. ಅವರೆಲ್ಲರೂ ಪ್ರತಿದಿನ ಸೂತ್ರಭಾಷ್ಯದ ಪಾರಾಯಣ ಮಾಡಿಯೇ ಭೋಜನ ಮಾಡುತ್ತಿದ್ದರು. ಅಷ್ಟು ಭಕ್ತಿ ಶ್ರೀಮದಾಚಾರ್ಯರ ಆ ಸೂತ್ರಭಾಷ್ಯದ ಮೇಲಿತ್ತು. ದ್ವಾದಶೀ ಪಾರಣೆ ಮೊದಲಾದ ದಿನ ತೊಂದರೆ ಆಗುತ್ತಿತ್ತು. ಹಾಗಿದ್ದರೂ ಊಟ ಬಿಡುತ್ತಿದ್ದರೆ ಹೊರತು ಪಾರಾಯಣ ಮಾತ್ರ ತಪ್ಪುತ್ತಿರಲಿಲ್ಲ. ಅದನ್ನು ನೋಡಿದ ಕರುಣಾಪೂರ್ಣರಾದ ಪೂರ್ಣಪ್ರಜ್ಞರು

ಸೂತ್ರಾರ್ಥದ ಪೂರ್ಣ ಪಾರಾಯಣಕ್ಕೆ ಅನುಕೂಲವಾಗುವಂತೆ ಈ ಅಣುಭಾಷ್ಯವನ್ನು ರಚಿಸಿದರು. ೩೪ ಶ್ಲೋಕಾತ್ಮಕವಾದ ಈ ಭಾಷ್ಯವನ್ನು ಕೇವಲ ೧೦ ನಿಮಿಷಗಳಲ್ಲಿ ಪಾರಾಯಣ ಮಾಡಬಹುದು.

ಜಗದೊಡೆಯ ಕೃಷ್ಣ ತನ್ನ ಪುಟ್ಟ ಬಾಯಿಯಲ್ಲಿ ಬ್ರಹ್ಮಾಂಡವನ್ನು ತೋರಿಸಿದ. ಜಗದ್ಗುರುಗಳಾದ ಪೂರ್ಣಪ್ರಜ್ಞರು ಸಮಸ್ತ ಸೂತ್ರಾರ್ಥವನ್ನು ಈ ಪುಟ್ಟ ಸ್ತೋತ್ರದಲ್ಲಿ ಅಡಗಿಸಿ ಇಟ್ಟರು. ಗುರುಗಳಾದ ಅಚ್ಯುತಪ್ರೇಕ್ಷರ ನಿತ್ಯ ಪಾರಾಯಣಕ್ಕೆ ಅನುಕೂಲವಾಗಲೆಂದು ಅಣುಭಾಷ್ಯ ರಚಿಸಿದರು ಎನ್ನುವ ಐತಿಹ್ಯವೂ ಉಂಟು.

ಅಣುಭಾಷ್ಯದ ಅರ್ಥವನ್ನು ತಿಳಿಸಲು ಅನೇಕ ಮಹಾನುಭಾವರು ಟಿಪ್ಪಣಿಗಳನ್ನು ಬರೆದಿದ್ದಾರೆ. ಟಿಪ್ಪಣಿಗಳ ಸಂಖ್ಯೆ ನೋಡಿದರೆ ಈ ಗ್ರಂಥದ ಮಹತ್ತ್ವ ತಿಳಿದು ಬರುತ್ತದೆ.

ಈ ಅಣುಭಾಷ್ಯಕ್ಕೆ ೨೬ ಕ್ಕೂ ಹೆಚ್ಚು ಟಿಪ್ಪಣಿಗಳು ಇದ್ದ ಉಲ್ಲೇಖವಿದೆ.

| | | |
|---|---|---|
| ೧) | ಅಣುಭಾಷ್ಯಟೀಕಾ | ಶ್ರೀ ನಾರಾಯಣಪಂಡಿತಾಚಾರ್ಯರು |
| ೨) | ಅಣುಭಾಷ್ಯಟೀಕಾ | ಶ್ರೀ ಜಯತೀರ್ಥರು |
| ೩) | ಅಣುಭಾಷ್ಯಟೀಕಾ (ಸಿದ್ಧಾಂತದೀಪಿಕಾ) | ಶ್ರೀ ಅನಂತಭಟ್ಟರು |
| ೪) | ಅಣುಭಾಷ್ಯಟೀಕಾ (ತತ್ತ್ವಪ್ರಕಾಶಿಕಾ) | ಶ್ರೀ ಛಲಾರೀ ಶೇಷಾಚಾರ್ಯರು |
| ೫) | ಅಣುಭಾಷ್ಯಟೀಕಾ (ತತ್ತ್ವಮಂಜರೀ) | ಶ್ರೀ ರಾಘವೇಂದ್ರಸ್ವಾಮಿಗಳವರು |
| ೬) | ಅಣುಭಾಷ್ಯಟಿಪ್ಪಣೀ | ಶ್ರೀ ಸತ್ಯಸಂಧತೀರ್ಥರು |
| ೭) | ಅಣುಭಾಷ್ಯವಿವರಣಮ್ | ಶ್ರೀ ಸತ್ಯನಾಥತೀರ್ಥರು |
| ೮) | ಅಣುಭಾಷ್ಯಟಿಪ್ಪಣೀ | ಶ್ರೀ ಮಳಗೀ ಸುಬ್ರಹ್ಮಣ್ಯಾಚಾರ್ಯರು |
| ೯) | ಅಣುಭಾಷ್ಯಟಿಪ್ಪಣೀ | ಶ್ರೀ ಗೂಢಕರ್ತೃಕ |
| ೧೦) | ಅಣುಭಾಷ್ಯಟಿಪ್ಪಣೀ | ಶ್ರೀ ನರಸಿಂಹಯತಿಗಳು |
| ೧೧) | ಅಣುಭಾಷ್ಯಟೀಕಾ(ಆನಂದಮಾಲಾ) | ಶ್ರೀ ತ್ರೈವಿಕ್ರಮಾರ್ಯದಾಸರು |
| ೧೨) | ಅಣುಭಾಷ್ಯಟೀಕಾ(ಭಾವಪ್ರಕಾಶಿಕಾ) | ಶ್ರೀ ನರಸಿಂಹಾಚಾರ್ಯರು |
| ೧೩) | ಅಣುಭಾಷ್ಯಟಿಪ್ಪಣೀ | ಶ್ರೀ ಶ್ರೀನಿವಾಸಾಚಾರ್ಯರು |
| ೧೪) | ಅಣುಭಾಷ್ಯವಿವರಣ | ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರು |
| ೧೫) | ಅಣುಭಾಷ್ಯವಿವೃತಿ | ಶ್ರೀ ಕಾಗಲೂರು ಆನಂದತೀರ್ಥಾರ್ಯರ ಪುತ್ರರು |
| ೧೬) | ಅಣುಭಾಷ್ಯಪ್ರಪಂಚನಮ್ | ಶ್ರೀ ಪೈಠಣೀ ನಾರಾಯಣಾಚಾರ್ಯರು |
| ೧೭) | ಅಣುಭಾಷ್ಯಪ್ರಕಾಶಿಕಾ | ಶ್ರೀ ಭೀಮಾಚಾರ್ಯ ಕಲ್ಲಾಪೂರ |
| ೧೮) | ಅಣುಭಾಷ್ಯಪ್ರದೀಪ | |
| ೧೯) | ಅಣುಭಾಷ್ಯಾರ್ಥ | |
| ೨೦) | ರಾಮಶಬ್ದಾರ್ಥಗರ್ಭಿತ ಅಣುಭಾಷ್ಯವಿವರಣ | ಶ್ರೀ ಸತ್ಯಸಂತುಷ್ಟರಶಿಷ್ಯರು |
| ೨೧) | ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯಾರ್ಥ | |
| ೨೨) | ಅಣುಭಾಷ್ಯಾರ್ಥಸಂಗ್ರಹ | ಶ್ರೀ ನಾರಾಯಣಪಂಡಿತರು |
| ೨೩) | ಅಣುಭಾಷ್ಯಭಾವಪ್ರಕಾಶನಮ್ | ಶ್ರೀ ನೃಸಿಂಹತೀರ್ಥರು |
| ೨೪) | ಅಣುಭಾಷ್ಯಪ್ರಕಾಶಿಕಾ | ಶ್ರೀ ಲಿಂಘೇರೀ ಶ್ರೀನಿವಾಸಾಚಾರ್ಯರು |
| ೨೫) | ಅಣುಭಾಷ್ಯವಿವರಣ | ಶ್ರೀ ನಾರಾಯಣಾಚಾರ್ಯರು |
| ೨೬) | ಅಣುಭಾಷ್ಯಟಿಪ್ಪಣೀ | ಶ್ರೀ ಪಾಂಪ್ರಿ ಶ್ರೀನಿವಾಸಾಚಾರ್ಯರು |

ಇದಲ್ಲದೆ ಇನ್ನೂ ಅನೇಕರು ಈ ಅಣುಭಾಷ್ಯಕ್ಕೆ ಟಿಪ್ಪಣಿ ಬರೆದಿರುವ ಸಾಧ್ಯತೆ ಇದೆ. ಉದಾಹರಣೆಗೆ ಉತ್ತರಾದಿಮಠದ ಪರಂಪರೆಯಲ್ಲಿ ಬಂದ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯಂದಿರಾದ ಶ್ರೀ ಪದ್ಮನಾಭತೀರ್ಥರು ಮತ್ತು ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು ಶ್ರೀ ನಾರಾಯಣಪಂಡಿತಾಚಾರ್ಯರೂ ಟಿಪ್ಪಣಿ ಬರೆದಿರುವರೆಂದು ಪರಂಪರೆಯಿದೆ. ಆದರೆ ಆ ಕೃತಿಗಳು ಈಗ ಉಪಲಬ್ಧವಾಗಿಲ್ಲ.

ಇದರಲ್ಲಿ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿಯು ಮುಂಬಯಿಯ ವಾಣೀವಿಹಾರವಿದ್ಯಾಲಯದ ವಿದ್ಯಾಮಾಸಪತ್ರಿಕೆಯಲ್ಲಿ ಮುದ್ರಿತವಾಗಿದೆ. ತ್ರೈವಿಕ್ರಮಾರ್ಯದಾಸರ ಆನಂದಮಾಲಾ ವಿದ್ವಾನ್ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಸಂಶೋಧಿಸಿ ಮುದ್ರಿಸಿದ್ದಾರೆ. ರಾಘವೇಂದ್ರಸ್ವಾಮಗಳ ತತ್ವಮಂಜರೀ ಗ್ರಂಥವನ್ನು ಅನೇಕಪ್ರಕಾಶಕರು ಪ್ರಕಾಶನ ಮಾಡಿದ್ದಾರೆ. ಛಲಾರಿ ಶೇಷಾಚಾರ್ಯರ ತಾತ್ಪರ್ಯಪ್ರಕಾಶಿಕಾ ಓರಿಯಂಟಲ್ ರಿಸರ್ಚ ಇನ್ಸಿಟ್ಯೂಟ್, ಮೈಸೂರು ಇವರು ಮುದ್ರಿಸಿದ್ದಾರೆ.

ಜಿಜ್ಞಾಸುಗಳ ಅನುಕೂಲಕ್ಕಾಗಿ ಈ ಸಂಪುಟದಲ್ಲಿ ಮುದ್ರಿತವಾದ ಮೇಲಿನ ೪ ವ್ಯಾಖ್ಯಾನಗಳೊಂದಿಗೆ ಈವರೆಗೆ ಮುದ್ರಿತವಾಗದಿರುವ ೭ ವ್ಯಾಖ್ಯಾನಗಳನ್ನು ಪ್ರಾಚೀನಹಸ್ತಪ್ರತಿಗಳ ಆಧಾರದ ಮೇಲೆ ಮುದ್ರಣಮಾಡಲಾಗುತ್ತಿದೆ.

ಈ ಪುಸ್ತಕದಲ್ಲಿ 1) ಶ್ರೀ ಸತ್ಯನಾಥತೀರ್ಥರ ಅಣುಭಾಷ್ಯವಿವರಣ, 2) ಶ್ರೀರಾಘವೇಂದ್ರಸ್ವಾಮಿಗಳ ತತ್ವಮಂಜರೀ, 3) ಶ್ರೀತ್ರೈವಿಕ್ರಮಾರ್ಯದಾಸರ ಆನಂದಮಾಲಾ, 4) ಶ್ರೀನೃಸಿಂಹತೀರ್ಥರ ಅಣುಭಾಷ್ಯಪ್ರಕಾಶನ, 5) ಶ್ರೀ ಶ್ರೀನಿವಾಸತೀರ್ಥರ ಅಣುಭಾಷ್ಯವಿವರಣ, 6) ಶ್ರೀ ಛಲಾರಿ ಶೇಷಾಚಾರ್ಯರ ಅಣುಭಾಷ್ಯತಾತ್ಪರ್ಯಪ್ರಕಾಶಿಕಾ, 7) ಶ್ರೀನಾರಾಯಣಾಚಾರ್ಯರ ಅಣುಭಾಷ್ಯಟಿಪ್ಪಣೀ, 8) ಶ್ರೀಮಳಗೀ ಸುಬ್ರಹ್ಮಣ್ಯಾಚಾರ್ಯರ ಅಣುಭಾಷ್ಯಕಂಜಮಾಲಿಕಾ, 9) ಶ್ರೀಲಿಂಘೇರೀ ಶ್ರೀನಿವಾಸಾಚಾರ್ಯರ ಅಣುಭಾಷ್ಯಟೀಕಾಪ್ರಪಂಚನಮ್, 10) ಶ್ರೀನಾರಾಯಣಪಂಡಿತಾಚಾರ್ಯರ ಅಣುಭಾಷ್ಯಾರ್ಥಸಂಗ್ರಹ ಮತ್ತು 11) ಗೂಢಕರ್ತೃಕ ಅಣುಭಾಷ್ಯ ಟಿಪ್ಪಣೀ ಇವುಗಳನ್ನು ಸೇರಿಸಿದ್ದೇವೆ.

## ಟಿಪ್ಪಣೀಕಾರರ ಪರಿಚಯ

### ಶ್ರೀ ಸತ್ಯನಾಥತೀರ್ಥರು

ಶ್ರೀ ಸತ್ಯನಾಥರು ಉತ್ತರಾದಿಮಠದಲ್ಲಿ ಆಗಿ ಹೋದ ಮಹಾಮಹಿಮರು. ಪೂರ್ವಾಶ್ರಮದಲ್ಲಿ ರಘುನಾಥಾ ಚಾರ್ಯರೆಂದು ಪ್ರಸಿದ್ಧರಾದ ಇವರು ಉತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀ ಸತ್ಯನಿಧಿಗಳ ಹತ್ತಿರ ಆಶ್ರಮವನ್ನು ಸ್ವೀಕರಿಸಿದರು. ವ್ಯಾಸರಾಯಮಠದ ಶ್ರೀ ಲಕ್ಷ್ಮೀನಾರಾಯಣತೀರ್ಥರ ಸಮಕಾಲೀನರು. ಶ್ರೀಸತ್ಯನಾಥರು ಬರೆದ ಗ್ರಂಥಗಳನ್ನು ನೋಡಿದರೆ ಇವರ ಅಪ್ರತಿಮ ಪಾಂಡಿತ್ಯವನ್ನು ಊಹಿಸಬಹುದು.

### ಶ್ರೀಸತ್ಯನಾಥರ ಕೃತಿಗಳು

ಶ್ರೀಮನ್ನ್ಯಾಯಸುಧಾಟಿಪ್ಪಣೀ
ಋಗ್ಭಾಷ್ಯಟೀಕೆಗೆ ಟಿಪ್ಪಣೀ

| | |
|---|---|
| ಅಭಿನವಚಂದ್ರಿಕಾ | ತತ್ವಪ್ರಕಾಶಿಕಾವ್ಯಾಖ್ಯಾನ |
| ಅಣುಭಾಷ್ಯವಿವರಣ | ಅಣುಭಾಷ್ಯದ ವ್ಯಾಖ್ಯಾನ |
| ಅಭಿನವಾಮೃತಂ | ಪ್ರಮಾಣಪದ್ಧತಿವ್ಯಾಖ್ಯಾನ |
| ಅಭಿನವತಾಂಡವಂ | ವೈಶೇಷಿಕಾದಿಪ್ರಕ್ರಿಯಾನಿರಾಕರಣೆ |
| ಕರ್ಮಪ್ರಕಾಶಿಕಾ | ಕರ್ಮನಿರ್ಣಯಟೀಕೆಯ ವ್ಯಾಖ್ಯಾನ |

ಸೂತ್ರಾರ್ಥದ ಪೂರ್ಣ ಪಾರಾಯಣಕ್ಕೆ ಅನುಕೂಲವಾಗುವಂತೆ ಈ ಅಣುಭಾಷ್ಯವನ್ನು ರಚಿಸಿದರು. ೩೪ ಶ್ಲೋಕಾತ್ಮಕವಾದ ಈ ಭಾಷ್ಯವನ್ನು ಕೇವಲ ೧೦ ನಿಮಿಷಗಳಲ್ಲಿ ಪಾರಾಯಣ ಮಾಡಬಹುದು.

ಜಗದೊಡೆಯ ಕೃಷ್ಣ ತನ್ನ ಪುಟ್ಟ ಬಾಯಿಯಲ್ಲಿ ಬ್ರಹ್ಮಾಂಡವನ್ನು ತೋರಿಸಿದ. ಜಗದ್ಗುರುಗಳಾದ ಪೂರ್ಣಪ್ರಜ್ಞರು ಸಮಸ್ತ ಸೂತ್ರಾರ್ಥವನ್ನು ಈ ಪುಟ್ಟ ಸ್ತೋತ್ರದಲ್ಲಿ ಅಡಗಿಸಿ ಇಟ್ಟರು. ಗುರುಗಳಾದ ಅಚ್ಯುತಪ್ರೇಕ್ಷರ ನಿತ್ಯ ಪಾರಾಯಣಕ್ಕೆ ಅನುಕೂಲವಾಗಲೆಂದು ಅಣುಭಾಷ್ಯ ರಚಿಸಿದರು ಎನ್ನುವ ಐತಿಹ್ಯವೂ ಉಂಟು.

ಅಣುಭಾಷ್ಯದ ಅರ್ಥವನ್ನು ತಿಳಿಸಲು ಅನೇಕ ಮಹಾನುಭಾವರು ಟಿಪ್ಪಣಿಗಳನ್ನು ಬರೆದಿದ್ದಾರೆ. ಟಿಪ್ಪಣಿಗಳ ಸಂಖ್ಯೆ ನೋಡಿದರೆ ಈ ಗ್ರಂಥದ ಮಹತ್ತ್ವ ತಿಳಿದು ಬರುತ್ತದೆ.

ಈ ಅಣುಭಾಷ್ಯಕ್ಕೆ ೨೬ ಕ್ಕೂ ಹೆಚ್ಚು ಟಿಪ್ಪಣಿಗಳು ಇದ್ದ ಉಲ್ಲೇಖವಿದೆ.

| | | |
|---|---|---|
| ೧) | ಅಣುಭಾಷ್ಯಟೀಕಾ | ಶ್ರೀ ನಾರಾಯಣಪಂಡಿತಾಚಾರ್ಯರು |
| ೨) | ಅಣುಭಾಷ್ಯಟೀಕಾ | ಶ್ರೀ ಜಯತೀರ್ಥರು |
| ೩) | ಅಣುಭಾಷ್ಯಟೀಕಾ (ಸಿದ್ಧಾಂತದೀಪಿಕಾ) | ಶ್ರೀ ಅನಂತಭಟ್ಟರು |
| ೪) | ಅಣುಭಾಷ್ಯಟೀಕಾ (ತತ್ತ್ವಪ್ರಕಾಶಿಕಾ) | ಶ್ರೀ ಛಲಾರೀ ಶೇಷಾಚಾರ್ಯರು |
| ೫) | ಅಣುಭಾಷ್ಯಟೀಕಾ (ತತ್ತ್ವಮಂಜರೀ) | ಶ್ರೀ ರಾಘವೇಂದ್ರಸ್ವಾಮಿಗಳವರು |
| ೬) | ಅಣುಭಾಷ್ಯಟಿಪ್ಪಣೀ | ಶ್ರೀ ಸತ್ಯಸಂಧತೀರ್ಥರು |
| ೭) | ಅಣುಭಾಷ್ಯವಿವರಣಮ್ | ಶ್ರೀ ಸತ್ಯನಾಥತೀರ್ಥರು |
| ೮) | ಅಣುಭಾಷ್ಯಟಿಪ್ಪಣೀ | ಶ್ರೀ ಮಳಗೀ ಸುಬ್ರಹ್ಮಣ್ಯಾಚಾರ್ಯರು |
| ೯) | ಅಣುಭಾಷ್ಯಟಿಪ್ಪಣೀ | ಶ್ರೀ ಗೂಢಕರ್ತೃಕ |
| ೧೦) | ಅಣುಭಾಷ್ಯಟಿಪ್ಪಣೀ | ಶ್ರೀ ನರಸಿಂಹಯತಿಗಳು |
| ೧೧) | ಅಣುಭಾಷ್ಯಟೀಕಾ(ಆನಂದಮಾಲಾ) | ಶ್ರೀ ತ್ರೈವಿಕ್ರಮಾರ್ಯದಾಸರು |
| ೧೨) | ಅಣುಭಾಷ್ಯಟೀಕಾ(ಭಾವಪ್ರಕಾಶಿಕಾ) | ಶ್ರೀ ನರಸಿಂಹಾಚಾರ್ಯರು |
| ೧೩) | ಅಣುಭಾಷ್ಯಟಿಪ್ಪಣೀ | ಶ್ರೀ ಶ್ರೀನಿವಾಸಾಚಾರ್ಯರು |
| ೧೪) | ಅಣುಭಾಷ್ಯವಿವರಣ | ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರು |
| ೧೫) | ಅಣುಭಾಷ್ಯವಿವೃತಿ | ಶ್ರೀ ಕಾಗಲೂರು ಆನಂದತೀರ್ಥಾರ್ಯರ ಪುತ್ರರು |
| ೧೬) | ಅಣುಭಾಷ್ಯಪ್ರಪಂಚನಮ್ | ಶ್ರೀ ಘೈರಣೀ ನಾರಾಯಣಾಚಾರ್ಯರು |
| ೧೭) | ಅಣುಭಾಷ್ಯಪ್ರಕಾಶಿಕಾ | ಶ್ರೀ ಭೀಮಾಚಾರ್ಯ ಕಲ್ಲಾಪೂರ |
| ೧೮) | ಅಣುಭಾಷ್ಯಪ್ರದೀಪ | |
| ೧೯) | ಅಣುಭಾಷ್ಯಾರ್ಥ | |
| ೨೦) | ರಾಮಶಬ್ದಾರ್ಥಗರ್ಭಿತ ಅಣುಭಾಷ್ಯವಿವರಣ | ಶ್ರೀ ಸತ್ಯಸಂತುಷ್ಟರಶಿಷ್ಯರು |
| ೨೧) | ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯಾರ್ಥ | |
| ೨೨) | ಅಣುಭಾಷ್ಯಾರ್ಥಸಂಗ್ರಹ | ಶ್ರೀ ನಾರಾಯಣಪಂಡಿತರು |
| ೨೩) | ಅಣುಭಾಷ್ಯಭಾವಪ್ರಕಾಶನಮ್ | ಶ್ರೀ ನೃಸಿಂಹತೀರ್ಥರು |
| ೨೪) | ಅಣುಭಾಷ್ಯಪ್ರಕಾಶಿಕಾ | ಶ್ರೀ ಲಿಂಘೇರೀ ಶ್ರೀನಿವಾಸಾಚಾರ್ಯರು |
| ೨೫) | ಅಣುಭಾಷ್ಯವಿವರಣ | ಶ್ರೀ ನಾರಾಯಣಾಚಾರ್ಯರು |
| ೨೬) | ಅಣುಭಾಷ್ಯಟಿಪ್ಪಣೀ | ಶ್ರೀ ಪಾಂಫ್ರಿ ಶ್ರೀನಿವಾಸಾಚಾರ್ಯರು |

ಇದಲ್ಲದೆ ಇನ್ನೂ ಅನೇಕರು ಈ ಅಣುಭಾಷ್ಯಕ್ಕೆ ಟಿಪ್ಪಣಿ ಬರೆದಿರುವ ಸಾಧ್ಯತೆ ಇದೆ. ಉದಾಹರಣೆಗೆ ಉತ್ತರಾದಿಮಠದ ಪರಂಪರೆಯಲ್ಲಿ ಬಂದ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯಂದಿರಾದ ಶ್ರೀ ಪದ್ಮನಾಭತೀರ್ಥರು ಮತ್ತು ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು ಶ್ರೀ ನಾರಾಯಣಪಂಡಿತಾಚಾರ್ಯರೂ ಟಿಪ್ಪಣಿ ಬರೆದಿರುವರೆಂದು ಪರಂಪರೆಯಿದೆ. ಆದರೆ ಆ ಕೃತಿಗಳು ಈಗ ಉಪಲಬ್ಧವಾಗಿಲ್ಲ.

ಇದರಲ್ಲಿ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿಯು ಮುಂಬಯಿಯ ವಾಣೀವಿಹಾರವಿದ್ಯಾಲಯದ ವಿದ್ಯಾಮಾಸಪತ್ರಿಕೆಯಲ್ಲಿ ಮುದ್ರಿತವಾಗಿದೆ. ತ್ರೈವಿಕ್ರಮಾರ್ಯದಾಸರ ಆನಂದಮಾಲಾ ವಿದ್ವಾನ್ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಸಂಶೋಧಿಸಿ ಮುದ್ರಿಸಿದ್ದಾರೆ. ರಾಘವೇಂದ್ರಸ್ವಾಮಿಗಳ ತತ್ವಮಂಜರೀ ಗ್ರಂಥವನ್ನು ಅನೇಕಪ್ರಕಾಶಕರು ಪ್ರಕಾಶನ ಮಾಡಿದ್ದಾರೆ. ಛಲಾರಿ ಶೇಷಾಚಾರ್ಯರ ತಾತ್ಪರ್ಯಪ್ರಕಾಶಿಕಾ ಓರಿಯಂಟಲ್ ರಿಸರ್ಚ ಇನ್ಸಿಟ್ಯೂಟ್, ಮೈಸೂರು ಇವರು ಮುದ್ರಿಸಿದ್ದಾರೆ.

ಜಿಜ್ಞಾಸುಗಳ ಅನುಕೂಲಕ್ಕಾಗಿ ಈ ಸಂಪುಟದಲ್ಲಿ ಮುದ್ರಿತವಾದ ಮೇಲಿನ ೪ ವ್ಯಾಖ್ಯಾನಗಳೊಂದಿಗೆ ಈವರೆಗೆ ಮುದ್ರಿತವಾಗದಿರುವ ೭ ವ್ಯಾಖ್ಯಾನಗಳನ್ನು ಪ್ರಾಚೀನಹಸ್ತಪ್ರತಿಗಳ ಆಧಾರದ ಮೇಲೆ ಮುದ್ರಣಮಾಡಲಾಗುತ್ತಿದೆ.

ಈ ಪುಸ್ತಕದಲ್ಲಿ 1) ಶ್ರೀ ಸತ್ಯನಾಥತೀರ್ಥರ ಅಣುಭಾಷ್ಯವಿವರಣ, 2) ಶ್ರೀರಾಘವೇಂದ್ರಸ್ವಾಮಿಗಳ ತತ್ವಮಂಜರೀ, 3) ಶ್ರೀತ್ರೈವಿಕ್ರಮಾರ್ಯದಾಸರ ಆನಂದಮಾಲಾ, 4) ಶ್ರೀನೃಸಿಂಹತೀರ್ಥರ ಅಣುಭಾಷ್ಯಪ್ರಕಾಶನ, 5) ಶ್ರೀ ಶ್ರೀನಿವಾಸತೀರ್ಥರ ಅಣುಭಾಷ್ಯವಿವರಣ, 6) ಶ್ರೀ ಛಲಾರಿ ಶೇಷಾಚಾರ್ಯರ ಅಣುಭಾಷ್ಯತಾತ್ಪರ್ಯಪ್ರಕಾಶಿಕಾ, 7) ಶ್ರೀನಾರಾಯಣಾಚಾರ್ಯರ ಅಣುಭಾಷ್ಯಟಿಪ್ಪಣೀ, 8) ಶ್ರೀಮಳಗೀ ಸುಬ್ರಹ್ಮಣ್ಯಾಚಾರ್ಯರ ಅಣುಭಾಷ್ಯಕಂಜಮಾಲಿಕಾ, 9) ಶ್ರೀಲಿಂಘೇರೀ ಶ್ರೀನಿವಾಸಾಚಾರ್ಯರ ಅಣುಭಾಷ್ಯಟೀಕಾಪ್ರಪಂಚನಮ್, 10) ಶ್ರೀನಾರಾಯಣಪಂಡಿತಾಚಾರ್ಯರ ಅಣುಭಾಷ್ಯಾರ್ಥಸಂಗ್ರಹ ಮತ್ತು 11) ಗೂಢಕರ್ತೃಕ ಅಣುಭಾಷ್ಯ ಟಿಪ್ಪಣೀ ಇವುಗಳನ್ನು ಸೇರಿಸಿದ್ದೇವೆ.

## ಟಿಪ್ಪಣೀಕಾರರ ಪರಿಚಯ

### ಶ್ರೀ ಸತ್ಯನಾಥತೀರ್ಥರು

ಶ್ರೀ ಸತ್ಯನಾಥರು ಉತ್ತರಾದಿಮಠದಲ್ಲಿ ಆಗಿ ಹೋದ ಮಹಾಮಹಿಮರು. ಪೂರ್ವಾಶ್ರಮದಲ್ಲಿ ರಘುನಾಥಾ ಚಾರ್ಯರೆಂದು ಪ್ರಸಿದ್ಧರಾದ ಇವರು ಉತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀ ಸತ್ಯನಿಧಿಗಳ ಹತ್ತಿರ ಆಶ್ರಮವನ್ನು ಸ್ವೀಕರಿಸಿದರು. ವ್ಯಾಸರಾಯಮಠದ ಶ್ರೀ ಲಕ್ಷ್ಮೀನಾರಾಯಣತೀರ್ಥರ ಸಮಕಾಲೀನರು. ಶ್ರೀಸತ್ಯನಾಥರು ಬರೆದ ಗ್ರಂಥಗಳನ್ನು ನೋಡಿದರೆ ಇವರ ಅಪ್ರತಿಮ ಪಾಂಡಿತ್ಯವನ್ನು ಊಹಿಸಬಹುದು.

### ಶ್ರೀಸತ್ಯನಾಥರ ಕೃತಿಗಳು

ಶ್ರೀಮನ್ನ್ಯಾಯಸುಧಾಟಿಪ್ಪಣೀ
ಋಗ್ಭಾಷ್ಯಟೀಕೆಗೆ ಟಿಪ್ಪಣೀ

| | |
|---|---|
| ಅಭಿನವಚಂದ್ರಿಕಾ | ತತ್ವಪ್ರಕಾಶಿಕಾವ್ಯಾಖ್ಯಾನ |
| ಅಣುಭಾಷ್ಯವಿವರಣ | ಅಣುಭಾಷ್ಯದ ವ್ಯಾಖ್ಯಾನ |
| ಅಭಿನವಾಮೃತಂ | ಪ್ರಮಾಣಪದ್ಧತಿವ್ಯಾಖ್ಯಾನ |
| ಅಭಿನವತಾಂಡವಂ | ವೈಶೇಷಿಕಾದಿಪ್ರಕ್ರಿಯಾನಿರಾಕರಣೆ |
| ಕರ್ಮಪ್ರಕಾಶಿಕಾ | ಕರ್ಮನಿರ್ಣಯಟೀಕೆಯ ವ್ಯಾಖ್ಯಾನ |

| | |
|---|---|
| ಅಭಿನವಗದಾ | ಅಪ್ಪಯ್ಯದೀಕ್ಷಿತಕೃತ ಮಧ್ವತಂತ್ರಮುಖಮರ್ದನಖಂಡನಗ್ರಂಥ |
| ಮಯಾವಾದಖಂಡನಪರಶು | ಮಾಯಾವಾದಖಂಡನ ಟಿಪ್ಪಣೀ |
| ಉಪಾಧಿಖಂಡನಪರಶು | ಉಪಾಧಿಖಂಡನಟಿಪ್ಪಣೀ |
| ಮಿಥ್ಯಾತ್ವಾನುಮಾನಖಂಡನಪರಶು | ಮಿಥ್ಯಾತ್ವಾನುಮಾನಖಂಡನಟಿಪ್ಪಣೀ |
| ವಿಜಯಮಾಲಾ | |

ಶ್ರೀಸತ್ಯನಾಥತೀರ್ಥರು ಅಣುಭಾಷ್ಯ ವ್ಯಾಖ್ಯಾನದ ಮಂಗಲಾಚರಣದಲ್ಲಿ ಕರಿಷ್ಯಾಮ್ಯರ್ಥಸಂಗ್ರಹಮ್ ಎಂದು ಹೇಳಿದಂತೆ ಕೇವಲ ಸಾಮಾನ್ಯರಿಗೆ ಹಾಗೂ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಈ ಟಿಪ್ಪಣಿಯನ್ನು ಬರೆದಿದ್ದಾರೆ. ಸುಂದರ ಸರಳ ಭಾಷೆಯಲ್ಲಿ ಸಿಗುವ ಈ ಟಿಪ್ಪಣೀ ಗಾತ್ರದಲ್ಲಿ ಅತ್ಯಂತ ಚಿಕ್ಕದಾದದ್ದು.

### ಶ್ರೀ ರಾಘವೇಂದ್ರತೀರ್ಥರು

ಆಸ್ತಿಕಸಮಾಜ ನಿತ್ಯ ನೆನೆಯುವ ಗುರುಗಳಲ್ಲಿ ಒಬ್ಬರು ಶ್ರೀ ರಾಘವೇಂದ್ರತೀರ್ಥಶ್ರೀಪಾದಂಗಳವರು. ಟಿಪ್ಪಣಿ ಗ್ರಂಥಗಳನ್ನು ಬರೆದು ಪಂಡಿತರಿಗೆ ಮಹದುಪಕಾರ ಮಾಡಿದ ಮಹಾನುಭಾವರು. ಐಹಿಕ ವರಗಳನ್ನು ಕೊಡುತ್ತ ಸಾಮಾನ್ಯರನ್ನು ನಾಸ್ತಿಕರನ್ನು ದೇವರೆಡೆಗೆ ಕರೆದೊಯ್ಯುವ ದೇವದೂತರು.

ಶ್ರೀರಾಘವೇಂದ್ರರು ಗೌತಮಗೋತ್ರದಲ್ಲಿ ಬಂದವರು. ಕೃಷ್ಣದೇವರಾಯರಿಗೆ ವೀಣಾಗುರುಗಳಾದ ಕೃಷ್ಣಭಟ್ಟರ ವಂಶದಲ್ಲಿ ಬಂದವರು. ತಂದೆ ತಿಮ್ಮಣ್ಣಾಚಾರ್ಯರು . ತಾಯಿ ಗೋಪಿಕಾಂಬಾ. ಮೂರು ಜನ ಮಕ್ಕಳಲ್ಲಿ ಕೊನೆಯವರಾಗಿ ಹುಟ್ಟಿದ ಇವರಿಗೆ ತಂದೆ ತಾಯಿ ಇಟ್ಟ ಹೆಸರು ವೆಂಕಟನಾಥ. ಇವರು ಪ್ರಾರಂಭದಲ್ಲಿ ಲಕ್ಷ್ಮೀನಾರಾಯಣಾಚಾರ್ಯರಿಂದ ಅಧ್ಯಯನ ಮಾಡಿ ನಂತರ ಶ್ರೀ ಸುಧೀಂದ್ರತೀರ್ಥರ ಹತ್ತಿರ ಉದ್ಗ್ರಂಥಗಳ ಅಧ್ಯಯನಮಾಡಿದರು. ಇವರ ಪಾಂಡಿತ್ಯ, ಪ್ರತಿಭೆ, ವೈರಾಗ್ಯ, ವಿನಯ ಇತ್ಯಾದಿ ಗುಣಗಳನ್ನು ಕಂಡು ಶ್ರೀಸುಧೀಂದ್ರತೀರ್ಥರು ಆಶ್ರಮವಿತ್ತು ಶ್ರೀರಾಘವೇಂದ್ರತೀರ್ಥರು ಎಂದು ಹೆಸರಿಸಿದರು. ಇವರ ತಪಸ್ಸನ್ನು ನೋಡಿ ಅನೇಕ ರಾಜಮಹಾರಾಜರೂ ಇವರ ದಾಸಾನುದಾಸರಾದರು. ಆಶ್ರಮವಾದ ಮೇಲೆ ಎಲ್ಲ ಭಾರತದ ವಿವಿಧ ಪ್ರದೇಶಗಳಲ್ಲಿ ಸಂಚರಿಸಿ ಮಾಧ್ವದೀಕ್ಷೆಯನ್ನು ಕೊಟ್ಟರು.

ಶ್ರೀರಾಘವೇಂದ್ರ ತೀರ್ಥರು ನಲವತ್ತಕ್ಕೂ ಹೆಚ್ಚು ಗ್ರಂಥಗಳನ್ನು ಬರೆದಿರುವರು. ಮೂಲಗ್ರಂಥಗಳನ್ನು ಸುಲಭವಾಗಿ ತಿಳಿಸುವ ಇವರ ಅನೇಕ ಟಿಪ್ಪಣಿಗಳಿಗೆ ಭಾವದೀಪ ಎಂದು ಹೆಸರಿಸಿದ್ದಾರೆ. ಹೆಚ್ಚಿನ ಗ್ರಂಥಗಳು ಮುನಿತ್ರಯರ (ಶ್ರೀಮದಾಚಾರ್ಯರು, ಶ್ರೀಜಯತೀರ್ಥರು,ಶ್ರೀವ್ಯಾಸರಾಜರು) ಗ್ರಂಥಗಳಿಗೆ ವ್ಯಾಖ್ಯಾನರೂಪದಲ್ಲಿದ್ದು ಅನೇಕ ಸ್ತೋತ್ರಗಳನ್ನೂ ರಚಿಸಿದ್ದಾರೆ.

ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದ ಹಾಗೂ ಒಟ್ಟಿಗೆ ೬ ಗ್ರಂಥಗಳನ್ನು ರಚಿಸಿದ್ದಾರೆ.

ತತ್ವಪ್ರಕಾಶಿಕಾಟಿಪ್ಪಣೀ ಭಾವದೀಪ, ನ್ಯಾಯಮುಕ್ತಾವಲಿ, ನ್ಯಾಯಸುಧಾ ಪರಿಮಳ ,ತತ್ವಮಂಜರೀ,ತಂತ್ರದೀಪಿಕಾ, ತಾತ್ಪರ್ಯಚಂದ್ರಿಕಾ. ಇದರಲ್ಲಿ ನ್ಯಾಯಸುಧಾ ಪರಿಮಳ ೧೯೩೦೦ ಗ್ರಂಥಾತ್ಮಕವಾಗಿದ್ದು ಅತ್ಯಂತ ದೊಡ್ಡದು.

ತತ್ವಮಂಜರಿ ಅಣುಭಾಷ್ಯದ ವ್ಯಾಖ್ಯಾನರೂಪವಾಗಿದ್ದು ೧೯೯೦ ಗ್ರಂಥಾತ್ಮಕವಾಗಿದೆ. ಅಣುಭಾಷ್ಯದಲ್ಲಿ ಬಂದ ಒಂದೊಂದು ಪದಗಳಿಂದ ಅನೇಕ ಅಧಿಕರಣಗಳ ಅರ್ಥವನ್ನು ತಿಳಿಸಿ ಕೊಡುತ್ತಾರೆ. ಸೂತ್ರಪ್ರಸ್ಥಾನಗ್ರಂಥಗಳನ್ನು ಹಾಗೂ ಅವುಗಳಿಗೆ ಬರೆದ ಶ್ರೀರಾಘವೇಂದ್ರತೀರ್ಥರ ಟಿಪ್ಪಣಿಗಳ ಸಂಕ್ಷೇಪ ಸಾರರೂಪ ಈ ತತ್ವಮಂಜರೀ ಎಂದರೆ ಅತಿಶಯೋಕ್ತಿ ಆಗಲಾರದು.

ಶ್ರೀ ತ್ರೈವಿಕ್ರಮಾರ್ಯದಾಸರು

ಇವರು ಆನಂದತೀರ್ಥರ ಪ್ರಮುಖ ಗೃಹಸ್ಥಶಿಷ್ಯರಲ್ಲಿ ಒಬ್ಬರಾದ ತ್ರಿವಿಕ್ರಮಪಂಡಿತಾಚಾರ್ಯರ ಪೌತ್ರರು. ಸುಮಧ್ವವಿಜಯ ರಚಿಸಿದ ನಾರಾಯಣಪಂಡಿತಾಚಾರ್ಯರ ಪುತ್ರರು. ಇವರ ಹೆಸರು ವಾಮನಪಂಡಿತರು, ಕಾವ್ಯನಾಮ ತ್ರೈವಿಕ್ರಮಾರ್ಯದಾಸ ಎಂದು ಕೆಲವರ ಅನಿಸಿಕೆ. ಇವರ ಸ್ಪಷ್ಟವಾದ ಹೆಸರಾಗಲಿ ಇತಿಹಾಸವಾಗಲಿ ಲಭ್ಯವಾಗಿಲ್ಲ. ಆದರೆ ಇವರು ಘನ ಪಂಡಿತರು ಎನ್ನುವದರಲ್ಲಿ ವಿವಾದ ಇಲ್ಲ. ತ್ರೈವಿಕ್ರಮಾರ್ಯದಾಸರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಆನಂದಮಾಲಾ, ಈಶಾವಾಸ್ಯ, ತಲವಕಾರ,ಕಾಠಕ,ಷಟ್ಪ್ರಶ್ನ,ಆಥರ್ವಣ ಹಾಗೂ ಮಾಂಡುಕ್ಯ ಉಪನಿಷದ್ಭಾಷ್ಯಗಳಿಗೆ ಟೀಕೆಯನ್ನು ರಚಿಸಿದ್ದಾರೆ. ನೃಸಿಂಹಗೀತಿ ಮತ್ತು ನಂದಸೂನುಸ್ತೋತ್ರ ಎನ್ನುವ ಎರಡು ಸ್ತೋತ್ರಗಳು ನಾರಾಯಣಪಂಡಿತಾಚಾರ್ಯರ ಶಿಷ್ಯರ ಹೆಸರಿನಲ್ಲಿ ಪ್ರಸಿದ್ಧವಾಗಿವೆ. ಈ ಎರಡು ಸ್ತೋತ್ರಗಳೂ ಕೂಡ ತ್ರೈವಿಕ್ರಮಾರ್ಯದಾಸರದು ಎಂದು ಅನೇಕರ ಅಭಿಪ್ರಾಯ.

ಅಣುಭಾಷ್ಯಕ್ಕೆ ಟಿಪ್ಪಣೀರೂಪದಲ್ಲಿ ರಚಿಸಿದ ಆನಂದಮಾಲ ವಿಸ್ತಾರವಾಗಿದ್ದು ಯಾವ ಯಾವ ಸೂತ್ರಗಳನ್ನು ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ ಎನ್ನುವದನ್ನು ತೋರಿಸುತ್ತ ಜೊತೆಗೆ ಓದುಗರ ಅನುಕೂಲಕ್ಕಾಗಿ ಅಧಿ ರಕರಣಾರ್ಥವನ್ನೂ ಪಾದಾರ್ಥವನ್ನೂ ಕೊಡುತ್ತಾರೆ. ಪೂರ್ವಜರಿಂದ ಅನುಗತವಾಗಿ ಬಂದ ಕಾವ್ಯಪ್ರತಿಭೆ ಈ ವೇದಾಂತಗ್ರಂಥದಲ್ಲೂ ಎದ್ದು ಬರುತ್ತದೆ.

एवं तावत् सकलकविकुलतिलको भगवानानन्दतीर्थार्याचार्यवर्यः पूर्णानन्दपदेनैवानन्द-मयाधिकरणपठितसूत्रार्थमखिलमपि संग्रहेण व्याचख्यौ। एवमेवोत्तरत्रापीति ज्ञातव्यम्। तत्तदधि-करणार्थानां संग्रहस्यैवेह चिकीर्षितत्वात्। कुतः ? स्वयमेवामुना सात्यर्थविस्तरं भाष्यस्य कृतत्वात्। करिष्यमाणत्वाच्च सबह्वर्थमनुभाष्यस्यापि । न हि बहुविशेषज्ञचूडामणिं सर्वज्ञ-भास्करमन्तरेणैतादृशभाष्यानुभाष्यविरचने चतुरतरचेताश्चतुर्दशभुवनेषु अस्ति। किम्पुनरेकेनैव वाक्येन पदेनाक्षरेण वा तत्तदधिकरणार्थसंग्रहभाषणकुशलमतिर्नास्तीति? यदभिप्रेतामितार्थ-स्यांशांशमपि लेशत एव वयं वक्तुं सम्प्रति यथामति यतामहे। न चास्माकं तत्प्रतिपादन-पाटवमपटुधियाम्। यद्यपि अस्मदाचार्यादयो मध्वसूक्तिसन्दर्शितार्थान् तत्प्रसादैकबलं अवलम्ब्य कथञ्चित् प्रायशः प्रकाशयितुं शक्नुवन्ति। तथाऽपि न खलु वयं खद्योतसमद्योतत्वात् एतद्द्योतितानपि तानंशांशेन च प्रकाशयितुं शक्नुमः। किं तर्हि मनोवाग्भिस्तद्भाष्यभावावर्तन-लौल्यादेवायमस्मत्सन्नाहविजृम्भः। तस्मात् इहास्मांस्तन्मन्तॄन् प्रणन्तॄन् महान्तः क्षन्तुमर्हन्ति।।

ಶ್ರೀಮದಾಚಾರ್ಯರಲ್ಲಿಅಚಲ ಭಕ್ತಿ, ಅವರ ಶಾಸ್ತ್ರದಲ್ಲಿ ಅನುಪಮ ವಿಶ್ವಾಸ ಇದೆಲ್ಲವೂ ಎದ್ದು ತೋರುತ್ತದೆ. ಅಲ್ಲಲ್ಲಿ ಅದ್ವೈತದ ಖಂಡನೆಯನ್ನೂ ಮಾಡುತ್ತಾರೆ.

ನೃಸಿಂಹತೀರ್ಥರು

ನೃಸಿಂಹತೀರ್ಥರು ಬಿಡಿ ಸನ್ಯಾಸಿಗಳು. ಪ್ರಾಯಃ ಸತ್ಯಾನಂದತೀರ್ಥರ ಹತ್ತಿರ ಆಶ್ರಮ ಸ್ವೀಕಾರಮಾಡಿದರು. ಅಣುಭಾಷ್ಯ ಟಿಪ್ಪಣಿಯ ಪ್ರಥಮಾಧ್ಯಾಯದ ಕೊನೆಯಲ್ಲಿ ಸತ್ಯಾನಂದಾರ್ಯಪುತ್ರೋ ಯಃ ಎಂದು ಹೇಳಿದ್ದಾರೆ. ಆದ್ದರಿಂದ ಇವರು ಸತ್ಯಾನಂದತೀರ್ಥರ ಪೂರ್ವಾಶ್ರಮದ ಮಕ್ಕಳೂ ಆಗಿರಬಹುದು. ಕೋನೇರಿ ಆಚಾರ್ಯರ ಹತ್ತಿರ ವಿದ್ಯಾಭ್ಯಾಸ ಪೂರೈಸಿದರು. ಇವರ ಅಣುಭಾಷ್ಯದ ಟಿಪ್ಪಣೀ ಗಮನಿಸಿದಾಗ ವ್ಯಾಕರಣದಲ್ಲಿ ವಿಶೇಷ ಆಸಕ್ತರು ಎಂದೆನಿಸುತ್ತದೆ.

## ಶ್ರೀ ಶ್ರೀನಿವಾಸತೀರ್ಥರು

ಬಿದರಹಳ್ಳಿ(ವಂಶಪಲ್ಲೀ)ಶ್ರೀನಿವಾಸತೀರ್ಥರು ಯಾದವಾರ್ಯರ ಅನುಜರು. ಅಗ್ರಜರಲ್ಲಿಯೇ ಅಭ್ಯಾಸ ಪೂರೈಸಿದರು. ವಿದ್ವನ್ಮಾನ್ಯರು. ರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ತೀರ್ಥ ಪದವಿ ಪಡೆದವರು. ೫೨ ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಸರಳ ಶೈಲಿ, ಪುಟ್ಟ ವಾಕ್ಯಗಳು, ವಿಶದವಾಗಿ ವಿಷಯ ಪ್ರತಿಪಾದನೆ ಇವೆಲ್ಲವು ಶ್ರೀನಿವಾಸತೀರ್ಥರ ವೈಶಿಷ್ಟ್ಯಗಳು.

ಕೇವಲ ಸಾಮಾನ್ಯರಿಗೆ ಹಾಗೂ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಈ ಟಿಪ್ಪಣಿಯನ್ನು ಬರೆದಿದ್ದಾರೆ. ಸುಂದರ ಸರಳ ಭಾಷೆಯಲ್ಲಿ ಸಿಗುವ ಈ ಟಿಪ್ಪಣೀ ಗಾತ್ರದಲ್ಲಿ ಮಧ್ಯಮಗಾತ್ರದ್ದಾಗಿದೆ.

## ಶ್ರೀ ಛಲಾರೀಶೇಷಾಚಾರ್ಯರು

ಛಲಾರಿ ನರಸಿಂಹಾರ್ಯಶಿಷ್ಯಶೇಷವಿನಿರ್ಮಿತಾ । ಅಣುಭಾಷ್ಯಸ್ಯ ಟೀಕಾ ಸ್ಯಾತ್ ಸತಾಂ ಸಂತೋಷಕಾರಿಣೀ ।

ಎಂದು ಅಣುಭಾಷ್ಯದ ಕೊನೆಯಲ್ಲಿ ಛಲಾರಿ ನರಸಿಂಹಾಚಾರ್ಯರನ್ನು ನಮಸ್ಕರಿಸಿದ್ದಾರೆ. ಆದ್ದರಿಂದ ಛಲಾರೀ ಶೇಷಾಚಾರ್ಯರು ಛಲಾರೀ ನರಸಿಂಹಾಚಾರ್ಯರ ವಿದ್ಯಾಶಿಷ್ಯರು ಎಂದು ತಿಳಿದು ಬರುತ್ತದೆ.

ಸತ್ಯನಿಧ್ಯಾಖ್ಯಯತಿರಾಟ್ ಛಲಾರಿನೃಹರೀ ಗುರೂ ।
ಮಂತ್ರವಿದ್ಯೋಪದೇಷ್ಟಾರೌ ವಂದೇಽಭಿಮತಸಿದ್ಧಯೇ ।

ಎಂದು ತಂತ್ರಸಾರಟಿಪ್ಪಣಿಯಲ್ಲಿ ಹೇಳಿದಪ್ರಕಾರ ಶ್ರೀಸತ್ಯನಿಧಿತೀರ್ಥಶ್ರೀಪಾದಂಗಳವರ ಹತ್ತಿರವೂ ಉದ್ಗ್ರಂಥಗಳನ್ನು ಮತ್ತೆ ಅಧ್ಯಯನ ಮಾಡಿದ್ದಾರೆ ಎಂತು ತಿಳಿದು ಬರುತ್ತದೆ. ಧರ್ಮಪುರಿಯ ಪುರುಷೋತ್ತಮಾಚಾರ್ಯರ ಮಕ್ಕಳು. ೧೭ ನೇ ಶತಮಾನದ ಉತ್ತರಾರ್ಧದಲ್ಲಿ ಇದ್ದವರು. ೧೬ ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.

೧) ಸುಮಧ್ವವಿಜಯ ಟೀಕಾ,
೨) ಪ್ರಮಾಣಚಂದ್ರಿಕಾ,
೩) ತಂತ್ರಸಾರಟೀಕಾ
೪) ನಖಸ್ತುತಿ ಟೀಕಾ
೫) ವಾಯುಸ್ತುತಿಟೀಕಾ
೬) ಅಣುಭಾಷ್ಯಟೀಕಾ
೭) ತತ್ತ್ವಸಂಖ್ಯಾನಟೀಕಾಟಿಪ್ಪಣೀ
೮) ಕರ್ಮನಿರ್ಣಯಟೀಕಾಟಿಪ್ಪಣೀ
೯) ಷಟ್ಪ್ರಶ್ನಭಾಷ್ಯಟೀಕಾಟಿಪ್ಪಣೀ
೧೦) ಭಾಗವತತಾತ್ಪರ್ಯಟೀಕಾ(ಅಷ್ಟಮಸ್ಕಂಧ)
೧೧) ಮಣಿಮಂಜರೀಟೀಕಾ,
೧೨) ನಿರ್ಣಯರತ್ನಮ್,
೧೩) ಲಘುತಿಥಿನಿರ್ಣಯಃ,
೧೪) ಸುಶಬ್ದಪ್ರದೀಪಃ,
೧೫) ಛಲಾರೀ ನರಸಿಂಹಾಚಾರ್ಯಸ್ತುತಿಃ,
೧೬) ಭಾಗವತಶ್ರುತಿಗೀತಾವ್ಯಾಖ್ಯಾನಮ್

ಇದರಲ್ಲಿ ಕೆಲವು ಪ್ರಕಟಿತ. ಮತ್ತೆ ಕೆಲವು ಅಪ್ರಕಟಿತ. ಇನ್ನೂ ಕೆಲವು ಉಪಲಬ್ಧವೂ ಆಗಿಲ್ಲ.

ಅಣುಭಾಷ್ಯಕ್ಕೆ ಬರೆದ ತಾತ್ಪರ್ಯಪ್ರಕಾಶಿಕಾ ಗಾತ್ರದಲ್ಲಿ ವಿಸ್ತಾರವಾಗಿದೆ. ಪ್ರತಿಯೊಂದು ಅಧಿಕರಣದ ಅರ್ಥ, ಅಲ್ಲಿ ಬರುವ ಪೂರ್ವಪಕ್ಷ, ಅದಕ್ಕೆ ಆಪಾತತಃ ಸಾಧಕವಾದ ಪ್ರಮಾಣ, ಸಿದ್ಧಾಂತ, ಅದಕ್ಕೆ ಬೇಕಾಗುವ ನಿರವಕಾಶ ಪ್ರಮಾಣ ಹೀಗೆ ವಿಸ್ತಾರವಾಗಿ ಬರೆದು, ಆ ಅಧಿಕರಣಾರ್ಥವನ್ನು ಅಣುಭಾಷ್ಯದಲ್ಲಿ ಸಮನ್ವಯ ಮಾಡಿದ್ದಾರೆ. ಅಣುಭಾಷ್ಯದ ವಿಸ್ತೃತ ಅಧ್ಯಯನ ಮಾಡುವವರಿಗೆ ಅಪ್ಯಾಯಮಾನವಾಗುದರಲ್ಲಿ ಅನುಮಾನವಿಲ್ಲ.

### ಶ್ರೀ ನಾರಾಯಣಾಚಾರ್ಯರು

ಶ್ರೀ ನಾರಾಯಣಾಚಾರ್ಯರು ೧೭ ನೇ ಶತಮಾನದವರು. ಅಣುಭಾಷ್ಯದಲ್ಲಿ ಅಪ್ಪಯ ದೀಕ್ಷಿತರನ್ನು ಖಂಡಿಸಿದ್ದನ್ನು ನೋಡಿದರೆ ಅದ್ವೈತಕಾಲಾನಲ ಬರೆದವರೇ ಈ ಅಣುಭಾಷ್ಯಕ್ಕೆ ಟಿಪ್ಪಣೀ ಬರೆದಿದ್ದಾರೆ ಎಂದೆನಿಸುತ್ತದೆ.

ಶ್ರೀ ನಾರಾಯಣಾಚಾರ್ಯರು ಬರೆದ ಅಣುಭಾಷ್ಯಟಿಪ್ಪಣೀ ಬಹಳ ವಿಸ್ತಾರವಾದದ್ದು. ಮಂಗಲಾಚರಣದಲ್ಲಿ ಸೂತ್ರಾದಿಕರಣಾರೂಢಾನ್ ದರ್ಶಯಾಮಿ ಸತಾಂ ಮುದೆ ಎಂದು ಹೇಳಿದಂತೆ ಪ್ರತಿಸೂತ್ರಗಳನ್ನು ಅಧಿಕರಣಗಳನ್ನು ಅಣುಭಾಷ್ಯದ ಶಬ್ದಗಳಲ್ಲಿ ತೋರಿಸಿ ಕೊಟ್ಟಿದ್ದಾರೆ. ಅಣುಭಾಷ್ಯದಲ್ಲಿ ಸೂತ್ರಭಾಷ್ಯದ ಚಿಂತನೆ ಮಾಡಬೇಕೆನ್ನುವವರಿಗೆ ಈ ಟಿಪ್ಪಣೀ ಅತ್ಯಂತ ಉಪಕಾರಕವಾಗಿದೆ. ಅಣುಭಾಷ್ಯದ ವಿಸ್ತೃತ ಅಧ್ಯಯನ ಮಾಡುವವರಿಗೆ ಆಪ್ಯಾಯ ಮಾನವಾಗುದರಲ್ಲಿ ಅನುಮಾನವಿಲ್ಲ.

### ಲಿಂಘೇರೀ ಶ್ರೀನಿವಾಸಾಚಾರ್ಯರು

ಇವರು ರುಕ್ಮಿಣೀಶಾರ್ಯರ ಮಕ್ಕಳು ಎಂದು ತಮ್ಮ ಅಣುಭಾಷ್ಯ ಟಿಪ್ಪಣಿಯ ಕೊನೆಗೆ ಹೇಳಿಕೊಂಡಿದ್ದಾರೆ.

ಲಿಂಘೇರೀಶ್ರೀನಿವಾಸೇನ ರುಗ್ಮಿಣೀಶಾರ್ಯಸೂನುನಾ
ವ್ಯಾಖ್ಯಾನಂ ತ್ವಣುಭಾಷ್ಯಸ್ಯ ಕೃತಂ ಶ್ರೀಹರಿತುಷ್ಟಯೇ

ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಈ ಟಿಪ್ಪಣಿಯನ್ನು ಬರೆದಿದ್ದಾರೆ. ಸುಂದರ ಸರಳ ಭಾಷೆಯಲ್ಲಿ ಸಿಗುವ ಈ ಟಿಪ್ಪಣೀ ಗಾತ್ರದಲ್ಲಿ ಚಿಕ್ಕದಾಗಿದೆ.

### ಮಳಗೀ ಸುಬ್ರಹ್ಮಣ್ಯಾಚಾರ್ಯರು

ಬಾಗಲಕೋಟೆಯ ಮಳಗೀ ಮನೆತನದಲ್ಲಿ ಬಂದವರು. ಭೀಮಾಚಾರ್ಯರ ಮಕ್ಕಳು. ಹೆಚ್ಚಿನ ವಿವರ ಲಭ್ಯವಾಗಿಲ್ಲ.

ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಈ ಟಿಪ್ಪಣಿಯನ್ನು ಬರೆದಿದ್ದಾರೆ. ಸುಂದರ ಸರಳ ಭಾಷೆಯಲ್ಲಿ ಸಿಗುವ ಈ ಟಿಪ್ಪಣೀ ಗಾತ್ರದಲ್ಲಿ ಚಿಕ್ಕದಾಗಿದೆ.

### ನಾರಾಯಣಪಂಡಿತರು

ಇವರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗಿಲ್ಲ.

ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಈ ಟಿಪ್ಪಣಿಯನ್ನು ಬರೆದಿದ್ದಾರೆ. ಸುಂದರ ಸರಳ ಭಾಷೆಯಲ್ಲಿ ಸಿಗುವ ಈ ಟಿಪ್ಪಣೀ ಗಾತ್ರದಲ್ಲಿ ಚಿಕ್ಕದಾಗಿದೆ.

### ಗೂಢಕರ್ತೃಕ

ಕೇವಲ ಸಾಮಾನ್ಯರ ಅನುಕೂಲಕ್ಕಾಗಿ ಈ ಟಿಪ್ಪಣಿಯನ್ನು ಬರೆದಿದ್ದಾರೆ. ಸುಂದರ ಸರಳ ಭಾಷೆಯಲ್ಲಿ ಸಿಗುವ ಈ ಟಿಪ್ಪಣೀ ಗಾತ್ರದಲ್ಲಿ ಚಿಕ್ಕದಾಗಿದೆ.

ಹೀಗೆ ಒಟ್ಟು ೧೧ ಟಿಪ್ಪಣಿಗಳಿಂದ ಕೂಡಿ ಈ ಅಣುಭಾಷ್ಯ ವಿಶ್ವಮಧ್ವಮಹಾಪರಿಷತ್ತಿನಿಂದ ಮುದ್ರಿತವಾಗಿದೆ. ವಿದ್ವಾಂಸರಿಗೆ ಹೆಚ್ಚು ಪ್ರಯೋಜಕವಾದ ಈ ಗ್ರಂಥ ಸಾಮಾನ್ಯ ಜನರಿಗೂ ತಿಳಿಯಬೇಕು ಎನ್ನುವ ಹಂಬಲದಿಂದ ಕನ್ನಡಾಕ್ಷರದಲ್ಲಿ ಅಣುಭಾಷ್ಯ, ಅದರ ಅರ್ಥವನ್ನು ಕೊಡಲಾಗಿದೆ. ಅಣುಭಾಷ್ಯದಲ್ಲಿ ಯಾವ ಯಾವ ಪದಗಳಿಂದ ಸೂತ್ರ ಹಾಗೂ ಭಾಷ್ಯವನ್ನು ಸಂಗ್ರಹಿಸಿದ್ದಾರೆ ಎನ್ನುವದು ಮತ್ತು ಆಯಾ ಅಧಿಕರಣಗಳಲ್ಲಿ ಪ್ರತಿಪಾದಿತವಾದ ವಿಷಯವನ್ನು ಕೇವಲ ದಿಗ್ದರ್ಶನ ಮಾಡುವದಕ್ಕಾಗಿ ಎರಡೆರಡು ವಾಕ್ಯಗಳಲ್ಲಿ ಸಂಗ್ರಹವನ್ನೂ ಮಾಡಲಾಗಿದೆ.

ಈ ಗ್ರಂಥದಲ್ಲಿ ಉದಾಹರಿಸಿದ ಪ್ರಮಾಣಗಳ ಆಕರವನ್ನು ಕೊಟ್ಟಿದ್ದೇವೆ. ೧೧ ಟಿಪ್ಪಣಿಗಳಲ್ಲಿ ಅವೇ ಪ್ರಮಾಣಗಳು ಮೇಲಿಂದ ಮೇಲೆ ಬರುವದರಿಂದ ಕೆಲವು ಕಡೆಗೆ ಆಕರವನ್ನು ಕೈ ಬಿಟ್ಟಿದ್ದೇನೆ. ಅದರ ಮಧ್ಯದಲ್ಲೂ ಕೆಲವು ಪ್ರಮಾದದಿಂದ ಉಳಿದಿರಬಹುದು. ವಿದ್ವಾಂಸರು ಸರಿಪಡಿಸಿಕೊಂಡು ಸಹಕರಿಸಿ ನನ್ನನ್ನು ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಗ್ರಂಥವನ್ನು ಸಾಕಷ್ಟು ಸಂಶೋಧಿಸಿದರೂ ತಪ್ಪುಗಳಿರುವದು ಸಹಜ. ಆದ್ದರಿಂದ ಓದುಗರು ಅದನ್ನು ಸಹನೆಯಿಂದ ತಿದ್ದಿಕೊಂಡು ನಮಗೂ ತಿಳಿಸದರೆ ಮುಂದಿನ ಮುದ್ರಣದಲ್ಲಿ ಅದನ್ನು ಸರಿಪಡಿಸಲುಗುವದು.

ಹೀಗೆ ಎಲ್ಲರಿಗೂ ಅನುಕೂಲವಾಗುವ ಈ ಗ್ರಂಥದ ಉಪಯೋಗವನ್ನು ಜಿಜ್ಞಾಸುಗಳು ಪಡೆಯಬೇಕೆಂದು ಪ್ರಾರ್ಥಿಸುತ್ತೇನೆ.

**ಕೃತಜ್ಞತಾಸಮರ್ಪಣೆ**

ಈ ಗ್ರಂಥವನ್ನು ಸಂಪಾದಿಸುವದಕ್ಕೆ ಮೂಲಪ್ರೇರಕರು ಉತ್ತರಾದಿಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು. ಶ್ರೀಮದಾಚಾರ್ಯರ ಸಿದ್ಧಾಂತ ಪ್ರಚಾರ, ಎಡೆಬಿಡದ ಪಾಠಪ್ರವಚನ, ನಿರಂತರ ಸಾಮಾಜಿಕ ಕಾರ್ಯಕ್ರಮ, ಕಷ್ಟದಲ್ಲಿರುವವರಿಗೆ ಸಾಂತ್ವನದ ಜೊತೆಗೆ ನೆರವು ಹೀಗೆ ಹತ್ತು ಹಲವು ಕಾರ್ಯಕ್ರಮಗಳಲ್ಲಿ ತೊಡಿಗಿಸಿಕೊಂಡಿರುವ ಶ್ರೀ ಶ್ರೀಪಾದಂಗಳವರು ನೂರಾರು ಜನ ಪಂಡಿತಶಿಷ್ಯರ ಮಧ್ಯದಲ್ಲಿ ನನ್ನನ್ನು ಗುರುತಿಸಿ ಈ ಗುರುತರವಾದ ಕೆಲಸವನ್ನು ವಹಿಸಿ ಪ್ರೇರಿಸಿ ಮಾಡಿಸಿದ್ದಕ್ಕಾಗಿ ಅವರ ಪಾದಾರವಿಂದಗಳಲ್ಲಿ ಅನಂತಾನಂತ ನಮಸ್ಕಾರಗಳು.

ನಿರಂತರ ಪಾಠಪ್ರವಚನದಲ್ಲಿ ರತರಾದ ಮಹಾವಿದ್ವಾಂಸರಾದ ಪೂಜ್ಯ ಶ್ರೀಪಾದಂಗಳವರ ಪೂರ್ವಾಶ್ರಮದ ತಂದೆಯಾದ ಪಂ.ಪೂ. ಗುತ್ತಲಾಚಾರ್ಯರ ಹತ್ತಿರ ನಾನು ಅಮುದ್ರಿತ ಪ್ರತಿಗಳನ್ನು ಡಿ.ಟಿ.ಪಿ ಮಾಡಿ ತೆಗೆದುಕೊಂಡು ಹೋದಾಗ, ಅವರಿಗೆ ಸಮಯವಿಲ್ಲದಿದ್ದರೂ ಹಗಲಿರುಳು ಕುಳಿತು ಎಲ್ಲವನ್ನು ಶ್ರದ್ಧೆಯಿಂದ ಕೇಳಿ ಅನೇಕ ತಪ್ಪುಗಳನ್ನು ತಿದ್ದಿ ಸಲಹೆಗಳನ್ನು ಕೊಟ್ಟು ಈ ಗ್ರಂಥ ಶುದ್ಧವಾಗಿ ಹೊರಬರುವದಕ್ಕೆ ಕಾರಣರಾಗಿದ್ದಾರೆ. ಪೂಜ್ಯ ಪಂ.ಗುತ್ತಲಾಚಾರ್ಯರಿಗೂ ಅನಂತ ನಮಸ್ಕಾರಗಳು.

ನಿರಂತರ ಪಾಠಪ್ರವಚನ, ತಂತ್ರಸಾರೋಕ್ತ ಎಲ್ಲ ಮಂತ್ರಗಳ ಜಪ, ಮಾತನಾಡಿದರೆ ದೇವರು ಗುರುಗಳು ಎನ್ನುವ ಇವೇ ಮೊದಲಾದ ಗುಣಗಳಿಂದ ಸಮಸ್ತ ಸಾತ್ವಿಕರ ವೈಯಕ್ತಿಕವಾಗಿ ನನ್ನ ಮನಸ್ಸನ್ನು ಸೆಳೆದ ನಮ್ಮ ಸ್ವರೂಪೋದ್ಧಾರಕಾರಾದ ಪೂಜ್ಯ ಆಚಾರ್ಯರು (ಮಾಹುಲಿ ಆಚಾರ್ಯರು) ನಾನು ಮಾಡಿದ ಈ ಕೆಲಸವನ್ನು ನನ್ನ ಹಿಂದೆ ನಿಂತು ಮಾಡಿಸಿದವರು. ಈಗಲೂ ನಿತ್ಯ ೨೦೦ ಜನ ವಿದ್ಯಾರ್ಥಿಗಳಿಗೆ ಪಾಠ ಹೇಳಿ ಬೇರೆ ಬೇರೆ ಊರುಗಳಲ್ಲಿರುವ ವಿದ್ಯಾಪೀಠದ ಪಂಡಿತರಿಗೂ ಕೂಡ ಆನ್‌ಲೈನ್ ಪಾಠವನ್ನು ಹೇಳುತ್ತಾರೆ ಎಂದರೆ ವಿದ್ಯಾರ್ಥಿಗಳು ಶುದ್ಧವಾದ ಜ್ಞಾನವನ್ನು ಪಡೆಯಬೇಕು ಎನ್ನುವ ಅವರ ಕಳಕಳಿ ತಿಳಿದುಬರುತ್ತದೆ. ಈ ಗ್ರಂಥದಲ್ಲಿ ಯಾವುದೇ ಗುಣವನ್ನು ಕಂಡರೂ ಅದರ ಹಿಂದೆ ಪೂಜ್ಯ ಆಚಾರ್ಯರ ಪರಿಶ್ರಮವಿದೆ ಎಂದು ಈ ಗ್ರಂಥ ಓದಿದವರು ತಿಳಿದರೆ ನಾನು ಮಾಡಿದ ಈ ಕೆಲಸ ಸಾರ್ಥಕವಾಗುತ್ತದೆ. ಈ ಸಂದರ್ಭದಲ್ಲಿ ಪೂಜ್ಯ ಆಚಾರ್ಯರಿಗೆ ಅನಂತನಮಸ್ಕಾರಗಳು.

ಲೌಕಿಕದಲಿದ್ದ , ಸಂಸ್ಕೃತದ ಗಂಧವೇ ಇಲ್ಲದ ನಮಗೆ ಸ್ತೋತ್ರ ಮಂತ್ರ ಪಾಠ ಹೇಳಿ, ಸಂಸ್ಕೃತ ಸಾಹಿತ್ಯ ಕಲಿಸಿ , ವಿದ್ಯಾಪೀಠಕ್ಕೆ ಕಳುಹಿಸಿ ಅನುಗ್ರಹಿಸಿದವರು ಪಂ.ಮಧ್ವಾಚಾರ್ಯ ಮೊಖಾಶಿ ಆಚಾರ್ಯರು. ಈ ಗ್ರಂಥವನ್ನು ಮಾಡಬೇಕಾದರೆ ಅನೇಕ ಸಲಹೆಗಳನ್ನು ಕೊಟ್ಟು ಈ ಗ್ರಂಥಕ್ಕೆ ಆಶಯವನ್ನು ಬರೆದು ಕೊಟ್ಟ ಪೂಜ್ಯ ಮೊಖಾಶಿ ಆಚಾರ್ಯರಿಗೆ ಅನಂತನಮಸ್ಕಾರಗಳು.

ಈ ಗ್ರಂಥವು ಸುಂದರವಾಗಿ ಸಿದ್ಧವಾಗುವದಕ್ಕೆ ಪ್ರತಿ ಹಂತದಲ್ಲೂ ಸಲಹೆ ಸೂಚನೆಗಳನ್ನು ಕೊಟ್ಟ ನನಗೆ ಅಣ್ಣನಂತೆ ಇರುವ ಪಂ.ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ಅನೇಕ ನಮಸ್ಕಾರಗಳು

ನನಗೆ ವೈಷ್ಣವಜನ್ಮ ಕೊಟ್ಟು ಗುರುಕುಲಕ್ಕೆ ಕಳುಹಿಸಿ ಇಲ್ಲಿಯವರೆಗೂ ನಾನು ಮಾಡುವ ಪ್ರತಿಕೆಲಸಕ್ಕೂ ಪ್ರೋತ್ಸಾಹಿಸುವ ಪೂಜ್ಯ ತಂದೆತಾಯಿವರಿಗೂ ಅನಂತ ನಮಸ್ಕಾರಗಳು.

ಅನೇಕ ಕಡೆಗೆ ಅಕ್ಷರಶೋಧನೆಯ ಕಾರ್ಯದಲ್ಲಿ ಸಹಾಯ ಮಾಡಿದ ಪಂ.ಪ್ರದ್ಯುಮ್ನಾಚಾರ್ಯ ಪೂಜಾರ, ಪಂ.ಶ್ರೀನಿವಾಸಾಚಾರ್ಯ ಮಠದ ಹಾಗೂ ಪಂ.ಪ್ರಸನ್ನಾಚಾರ್ಯ ಜೋಶಿ ಇವರಿಗೂ ನಮಸ್ಕಾರಗಳು

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೂ ಕೃತಜ್ಞತೆಗಳು.

*ಸಂಪಾದಕರು*

**ಸಂಜೀವಾಚಾರ್ಯ ಮದಭಾವಿ**

ಹೀಗೆ ಒಟ್ಟು ೧೧ ಟಿಪ್ಪಣಿಗಳಿಂದ ಕೂಡಿ ಈ ಅಣುಭಾಷ್ಯ ವಿಶ್ವಮಧ್ವಮಹಾಪರಿಷತ್ತಿನಿಂದ ಮುದ್ರಿತವಾಗಿದೆ. ವಿದ್ವಾಂಸರಿಗೆ ಹೆಚ್ಚು ಪ್ರಯೋಜಕವಾದ ಈ ಗ್ರಂಥ ಸಾಮಾನ್ಯ ಜನರಿಗೂ ತಿಳಿಯಬೇಕು ಎನ್ನುವ ಹಂಬಲದಿಂದ ಕನ್ನಡಾಕ್ಷರದಲ್ಲಿ ಅಣುಭಾಷ್ಯ, ಅದರ ಅರ್ಥವನ್ನು ಕೊಡಲಾಗಿದೆ. ಅಣುಭಾಷ್ಯದಲ್ಲಿ ಯಾವ ಯಾವ ಪದಗಳಿಂದ ಸೂತ್ರ ಹಾಗೂ ಭಾಷ್ಯವನ್ನು ಸಂಗ್ರಹಿಸಿದ್ದಾರೆ ಎನ್ನುವದು ಮತ್ತು ಆಯಾ ಅಧಿಕರಣಗಳಲ್ಲಿ ಪ್ರತಿಪಾದಿತವಾದ ವಿಷಯವನ್ನು ಕೇವಲ ದಿಗ್ದರ್ಶನ ಮಾಡುವದಕ್ಕಾಗಿ ಎರಡೆರಡು ವಾಕ್ಯಗಳಲ್ಲಿ ಸಂಗ್ರಹವನ್ನೂ ಮಾಡಲಾಗಿದೆ.

ಈ ಗ್ರಂಥದಲ್ಲಿ ಉದಾಹರಿಸಿದ ಪ್ರಮಾಣಗಳ ಆಕರವನ್ನು ಕೊಟ್ಟಿದ್ದೇವೆ. ೧೧ ಟಿಪ್ಪಣಿಗಳಲ್ಲಿ ಅವೇ ಪ್ರಮಾಣಗಳು ಮೇಲಿಂದ ಮೇಲೆ ಬರುವದರಿಂದ ಕೆಲವು ಕಡೆಗೆ ಆಕರವನ್ನು ಕೈ ಬಿಟ್ಟಿದ್ದೇನೆ. ಅದರ ಮಧ್ಯದಲ್ಲೂ ಕೆಲವು ಪ್ರಮಾದದಿಂದ ಉಳಿದಿರಬಹುದು. ವಿದ್ವಾಂಸರು ಸರಿಪಡಿಸಿಕೊಂಡು ಸಹಕರಿಸಿ ನನ್ನನ್ನು ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಗ್ರಂಥವನ್ನು ಸಾಕಷ್ಟು ಸಂಶೋಧಿಸಿದರೂ ತಪ್ಪುಗಳಿರುವದು ಸಹಜ. ಆದ್ದರಿಂದ ಓದುಗರು ಅದನ್ನು ಸಹನೆಯಿಂದ ತಿದ್ದಿಕೊಂಡು ನಮಗೂ ತಿಳಿಸದರೆ ಮುಂದಿನ ಮುದ್ರಣದಲ್ಲಿ ಅದನ್ನು ಸರಿಪಡಿಸಲಾಗುವದು.

ಹೀಗೆ ಎಲ್ಲರಿಗೂ ಅನುಕೂಲವಾಗುವ ಈ ಗ್ರಂಥದ ಉಪಯೋಗವನ್ನು ಜಿಜ್ಞಾಸುಗಳು ಪಡೆಯಬೇಕೆಂದು ಪ್ರಾರ್ಥಿಸುತ್ತೇನೆ.

**ಕೃತಜ್ಞತಾಸಮರ್ಪಣೆ**

ಈ ಗ್ರಂಥವನ್ನು ಸಂಪಾದಿಸುವದಕ್ಕೆ ಮೂಲಪ್ರೇರಕರು ಉತ್ತರಾದಿಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು. ಶ್ರೀಮದಾಚಾರ್ಯರ ಸಿದ್ಧಾಂತ ಪ್ರಚಾರ, ಎಡೆಬಿಡದ ಪಾಠಪ್ರವಚನ, ನಿರಂತರ ಸಾಮಾಜಿಕ ಕಾರ್ಯಕ್ರಮ, ಕಷ್ಟದಲ್ಲಿರುವವರಿಗೆ ಸಾಂತ್ವನದ ಜೊತೆಗೆ ನೆರವು ಹೀಗೆ ಹತ್ತು ಹಲವು ಕಾರ್ಯಕ್ರಮಗಳಲ್ಲಿ ತೊಡಿಗಿಸಿಕೊಂಡಿರುವ ಶ್ರೀ ಶ್ರೀಪಾದಂಗಳವರು ನೂರಾರು ಜನ ಪಂಡಿತಶಿಷ್ಯರ ಮಧ್ಯದಲ್ಲಿ ನನ್ನನ್ನು ಗುರುತಿಸಿ ಈ ಗುರುತರವಾದ ಕೆಲಸವನ್ನು ವಹಿಸಿ ಪ್ರೇರಿಸಿ ಮಾಡಿಸಿದ್ದಕ್ಕಾಗಿ ಅವರ ಪಾದಾರವಿಂದಗಳಲ್ಲಿ ಅನಂತಾನಂತ ನಮಸ್ಕಾರಗಳು.

ನಿರಂತರ ಪಾಠಪ್ರವಚನದಲ್ಲಿ ರತರಾದ ಮಹಾವಿದ್ವಾಂಸರಾದ ಪೂಜ್ಯ ಶ್ರೀಪಾದಂಗಳವರ ಪೂರ್ವಾಶ್ರಮದ ತಂದೆಯಾದ ಪಂ.ಪೂ. ಗುತ್ತಲಾಚಾರ್ಯರ ಹತ್ತಿರ ನಾನು ಅಮುದ್ರಿತ ಪ್ರತಿಗಳನ್ನು ಡಿ.ಟಿ.ಪಿ ಮಾಡಿ ತೆಗೆದುಕೊಂಡು ಹೋದಾಗ, ಅವರಿಗೆ ಸಮಯವಿಲ್ಲದಿದ್ದರೂ ಹಗಲಿರುಳು ಕುಳಿತು ಎಲ್ಲವನ್ನು ಶ್ರದ್ಧೆಯಿಂದ ಕೇಳಿ ಅನೇಕ ತಪ್ಪುಗಳನ್ನು ತಿದ್ದಿ ಸಲಹೆಗಳನ್ನು ಕೊಟ್ಟು ಈ ಗ್ರಂಥ ಶುದ್ಧವಾಗಿ ಹೊರಬರುವದಕ್ಕೆ ಕಾರಣರಾಗಿದ್ದಾರೆ. ಪೂಜ್ಯ ಪಂ.ಗುತ್ತಲಾಚಾರ್ಯರಿಗೂ ಅನಂತ ನಮಸ್ಕಾರಗಳು.

ನಿರಂತರ ಪಾಠಪ್ರವಚನ, ತಂತ್ರಸಾರೋಕ್ತ ಎಲ್ಲ ಮಂತ್ರಗಳ ಜಪ, ಮಾತನಾಡಿದರೆ ದೇವರು ಗುರುಗಳು ಎನ್ನುವ ಇವೇ ಮೊದಲಾದ ಗುಣಗಳಿಂದ ಸಮಸ್ತ ಸಾತ್ವಿಕರ ವೈಯಕ್ತಿಕವಾಗಿ ನನ್ನ ಮನಸ್ಸನ್ನು ಸೆಳೆದ ನಮ್ಮ ಸ್ವರೂಪೋದ್ಧಾರಕಾರಾದ ಪೂಜ್ಯ ಆಚಾರ್ಯರು (ಮಾಹುಲಿ ಆಚಾರ್ಯರು) ನಾನು ಮಾಡಿದ ಈ ಕೆಲಸವನ್ನು ನನ್ನ ಹಿಂದೆ ನಿಂತು ಮಾಡಿಸಿದವರು. ಈಗಲೂ ನಿತ್ಯ ೨೦೦ ಜನ ವಿದ್ಯಾರ್ಥಿಗಳಿಗೆ ಪಾಠ ಹೇಳಿ ಬೇರೆ ಬೇರೆ ಊರುಗಳಲ್ಲಿರುವ ವಿದ್ಯಾಪೀಠದ ಪಂಡಿತರಿಗೂ ಕೂಡ ಆನ್‌ಲೈನ್ ಪಾಠವನ್ನು ಹೇಳುತ್ತಾರೆ ಎಂದರೆ ವಿದ್ಯಾರ್ಥಿಗಳು ಶುದ್ಧವಾದ ಜ್ಞಾನವನ್ನು ಪಡೆಯಬೇಕು ಎನ್ನುವ ಅವರ ಕಳಕಳಿ ತಿಳಿದುಬರುತ್ತದೆ. ಈ ಗ್ರಂಥದಲ್ಲಿ ಯಾವುದೇ ಗುಣವನ್ನು ಕಂಡರೂ ಅದರ ಹಿಂದೆ ಪೂಜ್ಯ ಆಚಾರ್ಯರ ಪರಿಶ್ರಮವಿದೆ ಎಂದು ಈ ಗ್ರಂಥ ಓದಿದವರು ತಿಳಿದರೆ ನಾನು ಮಾಡಿದ ಈ ಕೆಲಸ ಸಾರ್ಥಕವಾಗುತ್ತದೆ. ಈ ಸಂದರ್ಭದಲ್ಲಿ ಪೂಜ್ಯ ಆಚಾರ್ಯರಿಗೆ ಅನಂತನಮಸ್ಕಾರಗಳು.

ಲೌಕಿಕದಲಿದ್ದ , ಸಂಸ್ಕೃತದ ಗಂಧವೇ ಇಲ್ಲದ ನಮಗೆ ಸ್ತೋತ್ರ ಮಂತ್ರ ಪಾಠ ಹೇಳಿ, ಸಂಸ್ಕೃತ ಸಾಹಿತ್ಯ ಕಲಿಸಿ , ವಿದ್ಯಾಪೀಠಕ್ಕೆ ಕಳುಹಿಸಿ ಅನುಗ್ರಹಿಸಿದವರು ಪಂ.ಮಧ್ವಾಚಾರ್ಯ ಮೊಖಾಶಿ ಆಚಾರ್ಯರು. ಈ ಗ್ರಂಥವನ್ನು ಮಾಡಬೇಕಾದರೆ ಅನೇಕ ಸಲಹೆಗಳನ್ನು ಕೊಟ್ಟು ಈ ಗ್ರಂಥಕ್ಕೆ ಆಶಯವನ್ನು ಬರೆದು ಕೊಟ್ಟ ಪೂಜ್ಯ ಮೊಖಾಶಿ ಆಚಾರ್ಯರಿಗೆ ಅನಂತನಮಸ್ಕಾರಗಳು.

ಈ ಗ್ರಂಥವು ಸುಂದರವಾಗಿ ಸಿದ್ಧವಾಗುವದಕ್ಕೆ ಪ್ರತಿ ಹಂತದಲ್ಲೂ ಸಲಹೆ ಸೂಚನೆಗಳನ್ನು ಕೊಟ್ಟ ನನಗೆ ಅಣ್ಣನಂತೆ ಇರುವ ಪಂ.ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ಅನೇಕ ನಮಸ್ಕಾರಗಳು

ನನಗೆ ವೈಷ್ಣವಜನ್ಮ ಕೊಟ್ಟು ಗುರುಕುಲಕ್ಕೆ ಕಳುಹಿಸಿ ಇಲ್ಲಿಯವರೆಗೂ ನಾನು ಮಾಡುವ ಪ್ರತಿಕೆಲಸಕ್ಕೂ ಪ್ರೋತ್ಸಾಹಿಸುವ ಪೂಜ್ಯ ತಂದೆತಾಯಿವರಿಗೂ ಅನಂತ ನಮಸ್ಕಾರಗಳು.

ಅನೇಕ ಕಡೆಗೆ ಅಕ್ಷರಶೋಧನೆಯ ಕಾರ್ಯದಲ್ಲಿ ಸಹಾಯ ಮಾಡಿದ ಪಂ.ಪ್ರದ್ಯುಮ್ನಾಚಾರ್ಯ ಪೂಜಾರ, ಪಂ.ಶ್ರೀನಿವಾಸಾಚಾರ್ಯ ಮಠದ ಹಾಗೂ ಪಂ.ಪ್ರಸನ್ನಾಚಾರ್ಯ ಜೋಶಿ ಇವರಿಗೂ ನಮಸ್ಕಾರಗಳು

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೂ ಕೃತಜ್ಞತೆಗಳು.

*ಸಂಪಾದಕರು*

**ಸಂಜೀವಾಚಾರ್ಯ ಮದಭಾವಿ**

# ಅಣುಭಾಷ್ಯಮ್

## (ಕನ್ನಡ ಅನುವಾದ)

**ಅಥ ಪ್ರಥಮೋಽಧ್ಯಾಯಃ**

**ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ॥೧॥**

**ಶ್ಲೋಕಾರ್ಥ - ಸರ್ವೈಃ ಗುಣೈಃ** - ಜ್ಞಾನಾನಂದಾದಿ ಸಮಸ್ತಗುಣಗಳಿಂದ, **ಉದೀರ್ಣಂ** - ಪರಿಪೂರ್ಣನಾದ, **ದೋಷವರ್ಜಿತಂ** - ಚಿಂತಾ,ಸಂತಾಪ,ಪಾರತಂತ್ರ್ಯಾದಿ ದೋಷರಹಿತನಾದ, (**ಮುಮುಕ್ಷುಭಿಃ**) **ಜ್ಞೇಯಂ** - ಮುಮುಕ್ಷುಗಳಿಂದ ಜ್ಞೇಯನಾದ, **ಗಮ್ಯಂ** - ಜ್ಞಾನದಿಂದ ಪ್ರಾಪ್ಯನಾದ, **ನಾರಾಯಣಂ** - ನಾರಾಯಣನನ್ನು **ನತ್ವಾ**- ನಮಸ್ಕರಿಸಿ **ಚ** - ಮತ್ತು **ಗುರೂನ್ ಅಪಿ** - ಪರಮೋಪದೇಷ್ಟ್ರುರಾದ ನಾರಾಯಣನಿಂದ ಅಭಿನ್ನರಾದ ಶ್ರೀವೇದವ್ಯಾಸರನ್ನು **ನತ್ವಾ** - ವಂದಿಸಿ, **ಸೂತ್ರಾರ್ಥಃ** - ಬ್ರಹ್ಮಸೂತ್ರಗಳ ಅರ್ಥವು **ಉಚ್ಯತೇ** - ಹೇಳಲ್ಪಡುತ್ತದೆ.

ಇದು ಅಣುಭಾಷ್ಯದ ಮಂಗಲಶ್ಲೋಕ. ಇಷ್ಟ, ವಿಶಿಷ್ಟ ಅಥವಾ ಗ್ರಂಥಪ್ರತಿಪಾದ್ಯವಾದವರನ್ನು ಹಾಡಿ ಹೊಗಳುವದೇ ಮಂಗಳ. ಇಲ್ಲಿ ಈ ಮೂರುಗುಣಗಳಿಂದ ವಿಶಿಷ್ಟನಾದ ನಾರಾಯಣನ ಸ್ತೋತ್ರ ಮಾಡಿದ್ದಾರೆ. ಸರ್ವೈಃ ಗುಣೈಃ ಉದೀರ್ಣಂ ಎಂದು ಪ್ರಥಮಾಧ್ಯಾಯದಲ್ಲಿ ಹೇಳಿದ ಗುಣಪೂರ್ಣತ್ವ, ದೋಷವರ್ಜಿತಮ್ ಎಂದು ದ್ವಿತೀಯಾಧ್ಯಾದಲ್ಲಿ ಹೇಳಿದ ದೋಷರಾಹಿತ್ಯ, ಜ್ಞೇಯಂ ಎಂದು ಮೂರನೇ ಅಧ್ಯಾಯದಲ್ಲಿ ಹೇಳಿದ ಶ್ರವಣ, ಮನನ, ನಿಧಿಧ್ಯಾಸನದಿಂದ ಪುಟ್ಟಿದ ಅಪರೋಕ್ಷಜ್ಞಾನವಿಷಯತ್ವ, ಗಮ್ಯಂ ಎಂದು ನಾಲ್ಕನೇ ಅಧ್ಯಾಯದಲ್ಲಿ ಹೇಳಿದ ಅಪರೋಕ್ಷಜ್ಞಾನದಿಂದ ಹೊಂದುವ ಪರಬ್ರಹ್ಮಪ್ರಾಪ್ತಿವಿಷಯತ್ವವನ್ನು ಸಂಕ್ಷೇಪವಾಗಿ ತಿಳಿಸಿದ್ದಾರೆ.

**ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾಽಽಗಮೋದಿತಃ ।**
**ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋಂತರಃ ಖವತ್ ॥೨॥**

**ಶ್ಲೋಕಾರ್ಥ - ವಿಷ್ಣುಃ ಏವ** - ಶ್ರೀನಾರಾಯಣನೇ **ವಿಜಿಜ್ಞಾಸ್ಯಃ** - ಶ್ರವಣಾದಿವಿಚಾರವಿಷಯನಾಗಿದ್ದಾನೆ, **ಸರ್ವಕರ್ತಾ** - ಶ್ರೀಬ್ರಹ್ಮಾದಿಸಮಸ್ತಪ್ರಪಂಚದ ಉತ್ಪತ್ತಿ, ಸ್ಥಿತಿ, ಸಂಹಾರ, ನಿಯತಿ, ಜ್ಞಾನ, ಆವೃತಿ, ಬಂಧ ಹಾಗೂ ಮೋಕ್ಷದನು, **ಸಮನ್ವಯಾತ್** - ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ನಿರ್ಣಯಿಸಲ್ಪಟ್ಟ ವಾಕ್ಯಗಳಿಂದ, **ಈಕ್ಷತೇಃ** - ಜ್ಞಾನವಿಷಯನಾದದ್ದರಿಂದ, **ಆಗಮೋದಿತಃ** - ಋಗ್ವೇದಾದಿ ಸಮಸ್ತ ವೇದಗಳ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನು, **ಪೂರ್ಣಾನಂದಃ** - ಪೂರ್ಣವಾದ ಆನಂದವುಳ್ಳವನು, **ಖವತ್** - ಆಕಾಶದಂತೆ **ಅಂತರಃ** - ಅಂತರ್ಯಾಮಿಯಾಗಿರುವವನು.

**ಅಧಿಕರಣ ಸಂಗ್ರಹ - ವಿಷ್ಣುರೇವ ವಿಜಿಜ್ಞಾಸ್ಯಃ** - ಜಿಜ್ಞಾಸಾಧಿಕರಣಮ್, **ಸರ್ವಕರ್ತಾ** - ಜನ್ಮಾದ್ಯಧಿಕರಣಮ್, **ಆಗಮೋದಿತಃ** - ಶಾಸ್ತ್ರಯೋನಿತ್ವಾಧಿಕರಣಮ್, **ಸಮನ್ವಯಾತ್** - ಸಮನ್ವಯಾಧಿಕರಣಮ್, **ಈಕ್ಷತೇಃ** - ಈಕ್ಷತ್ಯಧಿಕರಣಮ್, **ಪೂರ್ಣಾನಂದಃ** - ಆನಂದಮಯಾಧಿಕರಮ್, **ಅಂತರಃ** - ಅಂತಸ್ಥತ್ವಾಧಿಕರಣಮ್, **ಖವತ್** - ಆಕಾಶಾಧಿಕರಣಮ್.

**ಜಿಜ್ಞಾಸಾಧಿಕರಣ** - ೧ ಸೂತ್ರವಿರುವ ಈ ಅಧಿಕರಣದಲ್ಲಿ ವೇದಾಧ್ಯಯನ ಶಮದಮಾದಿರೂಪ ಅಧಿಕಾರಸಂಪತ್ತಿಪ್ರಾಪ್ತ್ಯನಂತರದಲ್ಲಿ, ಮೋಕ್ಷಾಖ್ಯ ಪ್ರಯೋಜನವಿರುವದರಿಂದ ಬ್ರಹ್ಮನ ಶ್ರವಣಾದಿರೂಪ ವಿಚಾರವನ್ನು ಮಾಡಬೇಕು ಎಂದು ಬ್ರಹ್ಮಜಿಜ್ಞಾಸಾ ಕರ್ತವ್ಯತ್ವವನ್ನು ಪ್ರತಿಪಾದಿಸಿದ್ದಾರೆ.

ಜನ್ಮಾಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ಜಿಜ್ಞಾಸ್ಯನಾದ ಬ್ರಹ್ಮನಲ್ಲಿ, ಇತರದೇವತೆಗಳಲ್ಲಿ ಅಸಂಭಾವಿತವಾದ ಸೃಷ್ಟ್ಯಾದಿ ಅಷ್ಟಕರ್ತೃತ್ವರೂಪ ಲಕ್ಷಣವನ್ನು ಪ್ರತಿಪಾದಿಸಿದ್ದಾರೆ.

ಶಾಸ್ತ್ರಯೋನಿತ್ವಾಧಿಕರಣ -೧ಸೂತ್ರವಿರುವ ಈ ಅಧಿಕರಣದಲ್ಲಿ ಜಗತ್ಕಾರಣನಾದ ಪರಮಾತ್ಮನು ವೇದಾದಿಶಾಸ್ತ್ರೈಕಸಮಧಿಗಮ್ಯನಾಗಿದ್ದಾನೆ ಎಂದು ಪ್ರತಿಪಾದಿಸಿದ್ದಾರೆ.

ಸಮನ್ವಯಾಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ವೇದಗತವಾದ ಉಪಕ್ರಮ ಉಪಸಂಹಾರಾದಿ ಅರ್ಥನಿರ್ಣಾಯಕವಾದ ಲಿಂಗಗಳಿಂದ ಮಹಾಯೋಗ ವಿದ್ವದ್ರೂಢಿಗಳಿಂದ ನೋಡಿದಾಗ ನಾರಾಯಣನೇ ಶಸ್ತ್ರೈಕಸಮಧಿಗಮ್ಯನಾಗಿದ್ದಾನೆ ಎಂದು ತಿಳಿಯುತ್ತದೆ ಎಂದು ಪ್ರತಿಪಾದಿಸಿದ್ದಾರೆ.

ಈಕ್ಷತ್ಯಧಿಕರಣ - ೭ಸೂತ್ರಗಳಿರುವ ಈ ಅಧಿಕರಣದಲ್ಲಿ ಯತೋ ವಾಚೋ ಇತ್ಯಾದಿಗಳಲ್ಲಿ ಹೇಳಿದಂತೆ ಬ್ರಹ್ಮ ಅವಾಚ್ಯನಾಗಿದ್ದಾನೆ ಎಂದು ತಿಳಿಯಬಾರದು ಕಿಂತು ಈಕ್ಷಣೀಯತ್ವೇನ ಬ್ರಹ್ಮ ವೇದದಲ್ಲಿ ಹೇಳಿದ್ದರಿಂದ ಲಕ್ಷಿತಲಕ್ಷಣಯಾ ಶಬ್ದವಾಚ್ಯತ್ವವೇ ಸಿದ್ಧವಾಗುತ್ತದೆ ಎಂದು ಪ್ರತಿಪಾದಿಸಿದ್ದಾರೆ.

ಆನಂದಮಯಾಧಿಕರಣ - ೮ ಸೂತ್ರಗಳಿರುವ ಈ ಅಧಿಕರಣದಲ್ಲಿ ತೈತರೀಯ ಉಪನಿಷತ್ತಿನಲ್ಲಿ ಬ್ರಹ್ಮಶಬ್ದದ ಅಭ್ಯಾಸವಿರುವದರಿಂದ ಆನಂದಮಯಶಬ್ದವಾಚ್ಯನಾದವನು ಬ್ರಹ್ಮನೇ ಎಂದು ಪ್ರತಿಪಾದಿಸಿದ್ದಾರೆ.

ಅಂತಸ್ತದ್ಧರ್ಮಾಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಅಂತಸ್ಥತ್ವರೂಪವಾದ ಲಿಂಗದಿಂದ ಅಶೇಷಾಧಿದೈವಗತವಾದ ಇಂದ್ರಾದಿಶಬ್ದಗಳನ್ನು ಭಗವತ್ಪರವಾಗಿ ಸಮರ್ಥಿಸಿದ್ದಾರೆ.

ಆಕಾಶಾಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ಆಧಿಭೌತಿಕವಾದ ಆಕಾಶಾದಿಸರ್ವನಾಮಗಳ ಸಮನ್ವಯವನ್ನು ಪ್ರತಿಪಾದಿಸಿದ್ದಾರೆ.

ಪ್ರಣೇತಾ ಜ್ಯೋತಿರಿತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು ।
ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ॥ ೩ ॥

ಶ್ಲೋಕಾರ್ಥ - ಅನ್ಯವಸ್ತುಷು - ಭಗವಂತನಿಂದ ಭಿನ್ನವಾದ ಪದಾರ್ಥಗಳಲ್ಲಿ ಪ್ರಸಿದ್ಧೈಃ - (ಲೋಕ)ಪ್ರಸಿದ್ಧವಾದ ಪ್ರಣೇತಾಜ್ಯೋತಿರಿತ್ಯಾದ್ಯೈಃ - ಪ್ರಣೇತಾ,ಜ್ಯೋತಿ ಇವೇ ಮೊದಲಾದ ಸರ್ವೈಃ - ಎಲ್ಲ ನಾಮಾತ್ಮಕ ಶಬ್ದಗಳಿಂದ, ವಿಷ್ಣುಃ - ಶ್ರೀಮನ್ನಾರಾಯಣನೇ ಏಕ ಏವ - ಮುಖ್ಯವೃತ್ತಿಯಿಂದ ಉಚ್ಯತೇ - ಪ್ರತಿಪಾದಿತನಾಗಿದ್ದಾನೆ. (ಕುತಃ) - ಎಕೆಂದರೆ, ಸರ್ವಗುಣತ್ವತಃ - ಪದಾರ್ಥಗಳಲ್ಲಿ ಕಾಣಸಿಗುವ ಪ್ರತಿ ಗುಣಗಳ ಪ್ರವೃತ್ತಿನಿಮಿತ್ತನೂ ಹಾಗೂ ಪ್ರಧಾನ ಆಶ್ರಯನೂ ನಾರಾಯಣನೇ,

ಅಧಿಕರಣ ಸಂಗ್ರಹ - ಪ್ರಣೇತಾ - ಪ್ರಾಣಾಧಿಕರಣಮ್. ಜ್ಯೋತಿಃ - ಜ್ಯೋತಿರಧಿಕರಣಮ್. ಇತ್ಯಾದ್ಯೈಃ - ಗಾಯತ್ರ್ಯಧಿಕರಣಮ್.ಅಂತಿಮಪ್ರಾಣಾಧಿಕರಣಮ್.

ಪ್ರಾಣಾಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ಆಧ್ಯಾತ್ಮಿಕ ಪ್ರಾಣಾದಿ ಅಶೇಷನಾಮಗಳ ಸಮನ್ವಯವನ್ನು ಪ್ರತಿಪಾದಿಸಿದ್ದಾರೆ.

ಜ್ಯೋತಿರಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ಜ್ಯೋತಿ ಎಂಬ ಶಬ್ದವನ್ನು ಹಾಗೂ ತದುಪಲಕ್ಷಣತಯಾ ಆ ಪ್ರಕರಣದಲ್ಲಿ ಬಂದ ಇತರ ಶಬ್ದಗಳ ಸಮನ್ವಯವನ್ನು ಪ್ರತಿಪಾದಿಸಿದ್ದಾರೆ.

ಗಾಯತ್ರ್ಯಧಿಕರಣ - ೩ ಸೂತ್ರಗಳಿರುವ ಈ ಅಧಿಕರಣದಲ್ಲಿ ಅಧಿವೇದಗತಗಾಯತ್ರೀ ಮೊದಲಾದ ಅಶೇಷಛಂದೋನಾಮಗಳ ಸಮನ್ವಯವನ್ನು ಪ್ರತಿಪಾದಿಸಿದ್ದಾರೆ.

**ಅಂತಿಮಪ್ರಾಣಾಧಿಕರಣ** - ೪ ಸೂತ್ರಗಳಿರುವ ಈ ಅಧಿಕರಣದಲ್ಲಿ ಐತರೇಯ ಆರಣ್ಯಕದಲ್ಲಿ ಹೇಳಿದ ಪ್ರಾಣಶಬ್ದ ಭಗವತ್ಪರ ಎಂದು ಪ್ರತಿಪಾದಿಸಿದ್ದಾರೆ.

**ಸರ್ವಗೋಽತ್ತಾ ನಿಯಂತಾ ಚ ದೃಶ್ಯತ್ವಾದ್ಯುಜ್ಝಿತಃ ಸದಾ ।**
**ವಿಶ್ವಜೀವಾಂತರತ್ವಾದ್ಯೈಃ ಲಿಂಗೈಃ ಸರ್ವೈಃ ಯುತಃ ಸ ಹಿ ॥ ೪ ॥**

**ಶ್ಲೋಕಾರ್ಥ** - **ಸರ್ವಗಃ** - ಕ್ಷಿತಿ ಮೊದಲಾದ ಸಮಸ್ತ ಜಗತ್ತಿನ ಕಣ ಕಣಗಳಲ್ಲೂ ವ್ಯಾಪಿಸಿದವನು, **ಅತ್ತಾ** - ರುದ್ರಾಂತರ್ಯಾಮಿಯಾಗಿದ್ದು ಜಗದ್ಭಕ್ಷಕನು, **ಸದಾ** - ಯಾವಾಗಲೂ, **ನಿಯಂತಾ** - ಸರ್ವನಿಯಾಮಕನು. **ದೃಶ್ಯತ್ವಾದ್ಯುಜ್ಝಿತಃ** - ಕಣ್ಣು ಕಿವಿಗಳಿಗೆ ವಿಷಯನಾಗದವನು. **ಸಃ** - ಶ್ರೀನಾರಾಯಣನು **ವಿಶ್ವಜೀವಾಂತರತ್ವಾದ್ಯೈಃ** - ಸರ್ವಜೀವರ ಅಂತರ್ಗತನಾಗಿದ್ದು, **ಸರ್ವೈ ಲಿಂಗೈಃ** - ಲೋಕತಃ ಅನ್ಯತ್ರ ಪ್ರಸಿದ್ಧವಾದ ಎಲ್ಲ ಲಿಂಗಾತ್ಮಕಶಬ್ದಗಳಿಂದ, **ಯುತಃ** - ಸಂಯುತನಾಗಿದ್ದಾನೆ. **ಹಿ** - ಇದು ಪ್ರಮಾಣಪ್ರಸಿದ್ಧವು.

**ಅಧಿಕರಣ ಸಂಗ್ರಹ** - **ಸರ್ವಗಃ** - ಸರ್ವಗತತ್ವಾಧಿಕರಣಮ್. **ಅತ್ತಾ** - ಅತ್ತೃತ್ವಾಧಿಕರಣಮ್.ಗುಹಾಧಿಕರಣಮ್. **ನಿಯಂತಾ** - ಅಂತರಾಧಿಕರಣಮ್. ಅಂತರ್ಯಾಮ್ಯಧಿಕರಣಮ್. **ದೃಶ್ಯತ್ವಾದ್ಯುಜ್ಝಿತಃ** - ಅದೃಶ್ಯತ್ವಾಧಿಕರಣಮ್. **ವಿಶ್ವಜೀವಾಂತರತ್ವಾದ್ಯೈಃ** - ವೈಶ್ವಾನರಾಧಿಕರಣಮ್.

**ಸರ್ವಗತತ್ವಾಧಿಕರಣ** – ೮ ಸೂತ್ರಗಳಿರುವ ಈ ಅಧಿಕರಣದಲ್ಲಿ ಆಪಾತತಃ ಆದಿತ್ಯಸ್ಥವಾಗಿ ಪ್ರತೀಯಮಾನವಾದ ಸರ್ವಗತತ್ವಾದಿಲಿಂಗಗಳು ಬ್ರಹ್ಮನಲ್ಲಿವೆ ಎಂದು ಪ್ರತಿಪಾದಿಸಿದ್ದಾರೆ.

**ಅತ್ತೃತ್ವಾಧಿಕರಣ** - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಸರ್ವಂ ವಾ ಅತ್ತಿ ಇತ್ಯಾದಿ ವೇದದಲ್ಲಿ ಬರುವ ಸರ್ವಾತ್ತೃತ್ವವು ದೇವಮಾತೆಯಾದ ಅದಿತಿಯಲ್ಲಿ ಇಲ್ಲ ಕಿಂತು ವಿಷ್ಣುವಿನಲ್ಲಿದೆ ಎಂದು ಪ್ರತಿಪಾದಿಸಿದ್ದಾರೆ.

**ಗುಹಾಧಿಕರಣ** - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಶ್ರುತ್ಯುಕ್ತಕರ್ಮಫಲಭೋಕ್ತೃತ್ವ ಆತ್ಮಾಂತರಾತ್ಮ ರೂಪನಾದ ಪರಮಾತ್ಮನಲ್ಲಿದೆ ಎಂದು ಪ್ರತಿಪಾದಿಸಿದ್ದಾರೆ.

**ಅಂತರಾಧಿಕರಣ** – ೫ ಸೂತ್ರಗಳಿರುವ ಈ ಅಧಿಕರಣದಲ್ಲಿ ಅಮೃತತ್ವಾದಿಲಿಂಗಗಳಿಂದ ಚಕ್ಷುರಂತಸ್ಥನಾದವನು ಪರಮಾತ್ಮನೇ ಎಂದು ಪ್ರತಿಪಾದಿಸಿದ್ದಾರೆ.

**ಅಂತರ್ಯಾಮ್ಯಧಿಕರಣ** – ೩ ಸೂತ್ರಗಳಿರುವ ಈ ಅಧಿಕರಣದಲ್ಲಿ ಅಧಿದೈವಾಧಿಭೂತಾದಿಪ್ರಕರಣಗಳಲ್ಲಿ ಬಂದ ಪೃಥಿವ್ಯಾದ್ಯವಿದಿತತ್ವ,ಅಂತರತ್ವಾದಿ ಲಿಂಗಗಳಿಂದ ವಿಷ್ಣುವಿಗೆ ಸರ್ವಾಂತರ್ಯಾಮಿತ್ವವನ್ನು ಪ್ರತಿಪಾದಿಸಿದ್ದಾರೆ.

**ಅದೃಶ್ಯತ್ವಾಧಿಕರಣ** - ೩ ಸೂತ್ರಗಳಿರುವ ಈ ಅಧಿಕರಣದಲ್ಲಿ ಯತ್ತದದ್ರೇಶ್ಯಂ ಎಂಬ ಶ್ರುತಿಯಲ್ಲಿ ಬಂದ ಅದೃಶ್ಯತ್ವಾದಿಗುಣಗಳು ಆ ಪ್ರಕರಣದಲ್ಲಿ ಬಂದ ಪರವಿದ್ಯಾವಿಷಯತ್ವ ಜಗಜ್ಜನ್ಮಾದಿಕರ್ತೃತ್ವಾದಿ ಅಸಾಧಾರಣ ಧರ್ಮಗಳಿಂದ ಪರಮಾತ್ಮನಲ್ಲಿಯೇ ಸಮನ್ವಯವಾಗುತ್ತವೆ ಎಂದು ಪ್ರತಿಪಾದಿಸಿದ್ದಾರೆ.

**ವೈಶ್ವಾನರಾಧಿಕರಣ** - ೯ ಸೂತ್ರಗಳಿರುವ ಈ ಅಧಿಕರಣದಲ್ಲಿ ಪಾಚಕತ್ವಾದಿ ಅನೇಕ ಲಿಂಗಗಳಿಂದ ಕೂಡಿದ ವೈಶ್ವಾನರ ಶಬ್ದ ಪರಮಾತ್ಮವಾಚಕವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

**ಸರ್ವಾಶ್ರಯಃ ಪೂರ್ಣಗುಣಃ ಸೋಽಕ್ಷರಃ ಸನ್ ಹೃದಬ್ಜಗಃ ।**
**ಸೂರ್ಯಾದಿಭಾಸಕಃ ಪ್ರಾಣಪ್ರೇರಕೋ ದೈವತೈರಪಿ ॥ ೪ ॥**

**ಶ್ಲೋಕಾರ್ಥ** - **ಸರ್ವಾಶ್ರಯಃ** - ಭೂಮಿಯೇ ಮೊದಲಾದ ಎಲ್ಲ ಲೋಕಗಳಿಗೂ ಆಶ್ರಯ. **ಸಃ** - ಆ ವಿಷ್ಣುವೇ **ಪೂರ್ಣಗುಣಃ** - ಭೂಮಶಬ್ದಾರ್ಥವಾದ ಗುಣಪೂರ್ಣನು, **ಅಕ್ಷರಃ** - ನಾಶರಹಿತನು, **ಸನ್** - ದೋಷರಹಿತನು,

ಹೃದಬ್ಜಗಃ - ಹೃತ್ಕಮಲದಲ್ಲಿರುವವನು, ಸೂರ್ಯಾದಿಭಾಸಕಃ - ಪ್ರಕಾಶಕರೆಂದೆನಿಸುವ ಸೂರ್ಯಾದಿಗಳಲ್ಲಿದ್ದು ಪ್ರಕಾಶ ನೀಡುವನು, ಪ್ರಾಣಪ್ರೇರಕಃ - ಮುಖ್ಯಪ್ರಾಣನಿಗೆ ಪ್ರೇರಕನಾಗಿ ಈಶಾನಶಬ್ದವಾಚ್ಯನು, ದೈವತೈಃ ಅಪಿ - ದೇವತೆಗಳಿಂದಲೂ (ಜ್ಞೇಯಃ - ಉಪಾಸ್ಯನು)

ಅಧಿಕರಣ ಸಂಗ್ರಹ - ಸರ್ವಾಶ್ರಯಃ - ದ್ಯುಭ್ವಾದ್ಯಧಿಕರಣಮ್. ಪೂರ್ಣಗುಣಃ - ಭೂಮಾಧಿಕರಣಮ್. ಸೋಕ್ಷರಃ - ಅಕ್ಷರಾಧಿಕರಣಮ್. ಸನ್ - ಸದಧಿಕರಣಮ್. ಹೃದಬ್ಜಗಃ - ದಹರಾಧಿಕರಣಮ್. ಸೂರ್ಯಾಧಿ ಭಾಸಕಃ - ಅನುಕೃತ್ಯಧಿಕರಣಮ್. ಪ್ರಾಣಪ್ರೇರಕಃ - ವಾಮನಾಧಿಕರಣಮ್. ದೈವತೈಃ - ದೇವತಾಧಿಕರಣಮ್.

ದ್ಯುಭ್ವಾದ್ಯಧಿಕರಣ - ೭ ಸೂತ್ರಗಳಿರುವ ಈ ಅಧಿಕರಣದಲ್ಲಿ ಅಸ್ಮಿನ್ ದ್ಯೌ ಇತ್ಯಾದಿ ಶ್ರುತಿಗಳಲ್ಲಿ ಶ್ರುತವಾದ ಸರ್ವಾಧಾರತ್ವವು ಸ್ವಶಬ್ದಪರ್ಯಾಯವಾದ ಆತ್ಮಶಬ್ದವಿದ್ದ ಕಾರಣ ಪರಮಾತ್ಮನಲ್ಲಿಯೆ ಇದೆ ಎಂದು ಪ್ರತಿಪಾದಿಸಿದ್ದಾರೆ.

ಭೂಮಾಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಶ್ರುತ್ಯುಕ್ತವಾದ ಭೂಮಾ ಶಬ್ದವು ವಾಯುವನ್ನು ಹೇಳಿಕೊಡುವದಿಲ್ಲ ಕಿಂತು ಪರಮಾತ್ಮವಾಚಕವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

ಅಕ್ಷರಾಧಿಕರಣ - ೩ ಸೂತ್ರಗಳಿರುವ ಈ ಅಧಿಕರಣದಲ್ಲಿ ಶ್ರುತ್ಯುಕ್ತವಾದ ಅಕ್ಷರಶಬ್ದವು ಲಕ್ಷ್ಮೀಯನ್ನು ಹೇಳಿಕೊಡುವದಿಲ್ಲ ಕಿಂತು ಪರಮಾತ್ಮವಾಚಕವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

ಸದಧಿಕರಣ - ೧ಸೂತ್ರವಿರುವ ಈ ಅಧಿಕರಣದಲ್ಲಿ ಸದೇವ ಎಂಬ ಶ್ರುತ್ಯುಕ್ತವಾದ ಸತ್ ಶಬ್ದವು ಪ್ರಕೃತಿಯನ್ನು ಹೇಳಿಕೊಡುವದಿಲ್ಲ ಕಿಂತು ಪರಮಾತ್ಮವಾಚಕವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

ದಹರಾಧಿಕರಣ - ೮ ಸೂತ್ರಗಳಿರುವ ಈ ಅಧಿಕರಣದಲ್ಲಿ ಹೃತ್ಪದ್ಮಸ್ಥನಾದವನು ಆಕಾಶವಲ್ಲ ಕಿಂತು ಪರಮಾತ್ಮನೇ ಎಂದು ಪ್ರತಿಪಾದಿಸಿದ್ದಾರೆ.

ಅನುಕೃತ್ಯಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಜ್ಞಾನಾರ್ಥಂ ಪ್ರಾರ್ಥಿತತ್ವರೂಪಾನುಕೂಲ್ಯೇನ ಗೃಹ್ಯಮಾಣತ್ವವು ಜ್ಞಾನಿಸುಖಿಕ್ಕಲ್ಲ ಕಿಂತು ಪರಮಾತ್ಮನಿಗೆ ಎಂದು ಪ್ರತಿಪಾದಿಸಿದ್ದಾರೆ.

ವಾಮನಾಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಕಾಠಕಶ್ರುತ್ಯುಕ್ತವಾದ ಈಶಾನಶಬ್ದವು ವಾಯುವನ್ನು ಹೇಳಿಕೊಡುವದಿಲ್ಲ ಕಿಂತು ಪರಮಾತ್ಮವಾಚಕವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

ದೇವತಾಧಿಕರಣ - ೮ ಸೂತ್ರಗಳಿರುವ ಈ ಅಧಿಕರಣದಲ್ಲಿ ಯೋಗ್ಯಮನುಷ್ಯರು ವಿದ್ಯಾಕರ್ಮಗಳಿಂದ ದೇವಾದಿತ್ವವನ್ನು ಹೊಂದಿದ ಮೇಲೂ ಅಧಿಕಾರೋಪಯೋಗಿಯಾದ ವಿಶಿಷ್ಟಬುದ್ಧ್ಯಾದಿಗಳು ಇರುವದರಿಂದ ನಿತ್ಯಫಲವಾದ ಮೋಕ್ಷದಲ್ಲಿ ಅರ್ಥಿತ್ವಸಂಭವಿಸುವದರಿಂದ ವೇದವಿದ್ಯಾಧಿಕಾರವಿದೆ ಎಂದು ಪ್ರತಿಪಾದಿಸಿದ್ದಾರೆ.

ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ ಕಂಪಕೋನ್ಯಶ್ಚ ಜೀವತಃ ।
ಪತಿತ್ವಾದಿಗುಣೈರ್ಯುಕ್ತಃ ತದನ್ಯತ್ರ ಚ ವಾಚಕೈಃ ।
ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ ॥೬॥

ಶ್ಲೋಕಾರ್ಥ - ಶೂದ್ರಾದ್ಯೈಃ - ಪಾದಜರಾದ ಶೂದ್ರಾದಿಗಳಿಂದ, ವೇದ್ಯೈಃ - ಅಪೌರುಷೇಯವಾದ ವೇದದಿಂದ ನ ಜ್ಞೇಯಃ - ಉಪಾಸ್ಯನಲ್ಲ, ಕಂಪಕಃ - ಸರ್ವಚೇಷ್ಟಕನಾದದ್ದರಿಂದ ಜಗತ್ಕಂಪಕನು. ವಜ್ರಶಬ್ದವಾಚ್ಯನು. ಜೀವತಃ ಅನ್ಯಃ - ನಿರವಧಿಕ ಶಕ್ತಿ ಸ್ವಾತಂತ್ರ್ಯವಿರುವ ನಾರಾಯಣನು ಅಲ್ಪಶಕ್ತಿ ಪರತಂತ್ರನಾದ ಜೀವನಿಂದ ಭಿನ್ನನು, ಪತಿತ್ವಾದಿಗುಣೈಃ ಯುಕ್ತಃ - ಸರ್ವಾಧಿಪತಿತ್ವಾದಿ ಗುಣಗಳಿಂದ ಕೂಡಿದವನು, ತದನ್ಯತ್ರ ಚ - ನಾರಾಯಣನಿಂದ ಭಿನ್ನವಾದ ವಸ್ತುಗಳಲ್ಲಿ , ವಾಚಕೈಃ - ವಾಚಕತ್ವೇನ ಪ್ರಸಿದ್ಧವಾದ ಎಲ್ಲ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳಿಂದ ಜನಾರ್ದನಃ - ಜನಸಂಹಾರಿ ಜನಾರ್ದನನು, ಏಕಃ - ಪರಮಮುಖ್ಯವೃತ್ತಿಯಿಂದ ವಾಚ್ಯಃ - ಪ್ರತಿಪಾದ್ಯನು.

**ಅಧಿಕರಣ ಸಂಗ್ರಹ - ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ - ಅಪಶೂದ್ರಾಧಿಕರಣಮ್. ಕಂಪಕಃ - ಕಂಪನಾಧಿಕರಣಮ್. ಜೀವತಃ ಅನ್ಯಸ್ಯ - ಜ್ಯೋತಿರಧಿಕರಣಮ್. ಸುಷುಪ್ತ್ಯಧಿಕರಣಮ್. ಸಮನ್ವಯಾತ್ (೨)- ಆಕಾಶಾಧಿಕರಣಮ್. ಪತಿತ್ವಾದಿಗುಣೈರ್ಯುಕ್ತಃ - ಬ್ರಾಹ್ಮಣಾಧಿಕರಣಮ್.**

**ಅಪಶೂದ್ರಾಧಿಕರಣ** - ೫ ಸೂತ್ರಗಳಿರುವ ಈ ಅಧಿಕರಣದಲ್ಲಿ ಶೂದ್ರರಿಗೆ ವೇದವಿದ್ಯಾಧಿಕಾರವನ್ನು ನಿರಾಕರಿಸಿ ಜಾತಾಪರೋಕ್ಷಿಗಳಾದ ವಿದುರಾದಿ ಶೂದ್ರರಿಗೆ ಹಾಗೂ ಊರ್ವಶ್ಯಾದಿ ಸ್ತ್ರೀಯರಿಗೆ ವೇದವಿದ್ಯಾಧಿಕಾರವನ್ನು ಸಮರ್ಥಿಸಿದ್ದಾರೆ.

**ಕಂಪನಾಧಿಕರಣ** - ೧ ಸೂತ್ರವಿರುವ ಈ ಅಧಿಕರಣದಲ್ಲಿ ವಜ್ರಶಬ್ದ ವಿಷ್ಣುವಾಚಿಯಾಗಿದೆ ಎಂದು ಸಮರ್ಥಿಸಿದ್ದಾರೆ.

**ಜ್ಯೋತಿರಧಿಕರಣ** - ೧ ಸೂತ್ರವಿರುವ ಈ ಅಧಿಕರಣದಲ್ಲಿ ಜ್ಯೋತಿಶಬ್ದ ವಿಷ್ಣುವಾಚಿಯಾಗಿದೆ ಎಂದು ಸಮರ್ಥಿಸಿದ್ದಾರೆ.

**ಆಕಾಶಾಧಿಕರಣ** - ೧ ಸೂತ್ರವಿರುವ ಈ ಅಧಿಕರಣದಲ್ಲಿ ಆಕಾಶೋ ವೈ ನಾಮ ಎಂಬ ಶ್ರುತ್ಯುಕ್ತಆಕಾಶಶಬ್ದ ವಿಷ್ಣುವಾಚಿಯಾಗಿದೆ ಎಂದು ಸಮರ್ಥಿಸಿದ್ದಾರೆ.

**ಸುಷುಪ್ತ್ಯಧಿಕರಣ** - ೧ ಸೂತ್ರವಿರುವ ಈ ಅಧಿಕರಣದಲ್ಲಿ ಸ್ವಪ್ನಾದಿದೃಷ್ಟತ್ವವು ವಿಷ್ಣುವಿನಲ್ಲಿದೆ ಎಂದು ಸಮರ್ಥಿಸಿದ್ದಾರೆ.

**ಬ್ರಾಹ್ಮಣಾಧಿಕರಣ** - ೧ ಸೂತ್ರವಿರುವ ಈ ಅಧಿಕರಣದಲ್ಲಿ ಬ್ರಾಹ್ಮಣಶಬ್ದ ವಿಷ್ಣುವಾಚಕಯಾಗಿದೆ ಹೊರತು ಚತುರ್ಮುಖ ಬ್ರಹ್ಮವಾಚಕವಲ್ಲ ಎಂದು ಸಮರ್ಥಿಸಿದ್ದಾರೆ.

> **ಅವ್ಯಕ್ತಃ ಕರ್ಮವಾಕ್ಯೈ(ಚ್ಯೈ)ಶ್ಚ ವಾಚ್ಯ ಏಕೋಽಮಿತಾತ್ಮಕಃ ।**
> **ಅವಾಂತರಂ ಕಾರಣಂ ಚ ಪ್ರಕೃತಿಃ ಶೂನ್ಯಮೇವ ಚ ॥7॥**
>
> **ಇತ್ಯಾದ್ಯನ್ಯತ್ರ ನಿಯತೈರಪಿ ಮುಖ್ಯತಯೋದಿತಃ ।**
> **ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ॥8॥**

**ಶ್ಲೋಕಾರ್ಥ** - **ಅವ್ಯಕ್ತಃ** - ಚಿದಚಿತ್ ಪ್ರಕೃತಿನಿಯಾಮಕ, ಸೂಕ್ಷ್ಮನಾದ ಪರಮಾತ್ಮ ಅವ್ಯಕ್ತ ಶಬ್ದವಾಚ್ಯನು, **ಕರ್ಮವಾಕ್ಯೈಶ್ಚ** - ಜ್ಯೋತಿಷ್ಠೋಮಾದಿ ಕರ್ಮ ಹಾಗೂ ತದಂಗಪ್ರತಿಪಾದಕವಾದ ವಾಕ್ಯಗಳಿಂದ, **ವಾಚ್ಯಃ** - ಶ್ರೀನಾರಾಯಣನೇ ಮುಖ್ಯವಾಚ್ಯನು. **ಏಕಃ** - ಅದ್ವಿತೀಯ, **ಅಮಿತಾತ್ಮಕಃ** - ಅಪರಿಚ್ಛಿನ್ನರೂಪವುಳ್ಳವನು. ಅನೇಕರೂಪಗಳಿರುವ ಕಾರಣ ಪಂಚಜನಾದಿಶಬ್ದವಾಚ್ಯನು. **ಅವಾಂತರಂ ಕಾರಣಂ ಚ** - ಅವಾಂತರಕಾರಣನಾದ್ದರಿಂದ ಆಕಾಶಾದಿ ಶಬ್ದವಾಚ್ಯನು. ನಿಮಿತ್ತಕಾರಣನು. **ಪ್ರಕೃತಿಃ** - ಪ್ರಕೃತ್ಯಾದಿಸ್ತ್ರೀಶಬ್ದವಾಚ್ಯನು. **ಚ** - ಮತ್ತು **ಶೂನ್ಯಂ ಏವ** - ತನ್ನ ಸುಖಕ್ಕಿಂತಲೂ ಉಳಿದವರ ಸುಖ ಕಡಿಮೆಮಾಡುವನಾದ್ದರಿಂದ ಶೂನ್ಯಶಬ್ದವಾಚ್ಯನು, **ಇತ್ಯಾದಿ** - ಈ ವರೆಗೆ ಹೇಳಿದ ಅವ್ಯಕ್ತ ಮೊದಲಾದ, **ಅನ್ಯತ್ರ ನಿಯತೈಃ** - ಭಗವದಿತರ ವಸ್ತುಗಳಲ್ಲಿ ಪ್ರಸಿದ್ಧವಾದ **ಶಬ್ದೈಃ ಅಪಿ** - ಶಬ್ದಗಳಿಂದಲೂ, **ಮುಖ್ಯತಯಾ** - ಪರಮಮುಖ್ಯವೃತ್ತಿಯಿಂದ, **ಉದಿತಃ** - ಪ್ರತಿಪಾದ್ಯನು. **ಯತಃ** - ಯಾವ ಕಾರಣದಿಂದ, **ಶಬ್ದಾಃ** - ಎಲ್ಲ ಶಬ್ದಗಳು, **ಯೋಗವೃತ್ತಯಃ** - ವಿದ್ವದ್ರೂಢಿಮಹಾಯೋಗಗಳಿಂದ ಭಗವದ್ಗುಣಪ್ರತಿಪಾದಕವಾಗಿವೆಯೋ, **ಅತಃ** - ಆದ ಕಾರಣ, (**ನಾರಾಯಣಃ**) - ನಾರಾಯಣನು **ಅನಂತಗುಣಃ** - ಅನಂತಗುಣಪೂರ್ಣನು.

**ಅಧಿಕರಣ ಸಂಗ್ರಹ - ಅವ್ಯಕ್ತಃ - ಆನುಮಾನಿಕಾಧಿಕರಣಮ್. ಕರ್ಮವಾಕ್ಯೈಶ್ಚ - ಜ್ಯೋತಿರುಪಕ್ರಮಾಧಿಕರಣಮ್. ಏಕಃ ಅಮಿತಾತ್ಮಕಃ - ನಸಂಖ್ಯೋಪಸಂಗ್ರಹಾಧಿಕರಣಮ್. (ಸಮಾಕರ್ಷಾಧಿಕರಣಮ್.) ಅವಾಂತರಂ ಕಾರಣಂ ಚ - ಆಕಾಶಾಧಿಕರಣಮ್. ಪ್ರಕೃತಿಃ - ಪ್ರಕೃತ್ಯಧಿಕರಣಮ್. ಶೂನ್ಯಮೇವ ಚ - ಏತೇನ ಸರ್ವೇವ್ಯಾಖ್ಯಾತಾಧಿಕರಣಮ್.**

ಆನುಮಾನಿಕಾಧಿಕರಣ - ೯ ಸೂತ್ರಗಳಿರುವ ಈ ಅಧಿಕರಣದಲ್ಲಿ ಶ್ರುತ್ಯುಕ್ತವಾದ ಅವ್ಯಕ್ತಾದಿಶಬ್ದಗಳು ಪ್ರಧಾನವನ್ನು ಹೇಳಿಕೊಡುವದಿಲ್ಲ ಕಿಂತು ಪರಮಾತ್ಮವಾಚಕವಾಗಿವೆ ಎಂದು ಪ್ರತಿಪಾದಿಸಿದ್ದಾರೆ.

ಜ್ಯೋತಿರುಪಕ್ರಮಾಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಶ್ರುತ್ಯುಕ್ತವಾದ ಜ್ಯೋತಿಷ್ಟೋಮಾದಿಶಬ್ದಗಳು ಪರಮಾತ್ಮವಾಚಕವಾಗಿವೆ ಎಂದು ಪ್ರತಿಪಾದಿಸಿದ್ದಾರೆ.

ನಸಂಖ್ಯೋಪಸಂಗ್ರಹಾಧಿಕರಣ - ೩ ಸೂತ್ರಗಳಿರುವ ಈ ಅಧಿಕರಣದಲ್ಲಿ ಶ್ರುತ್ಯುಕ್ತವಾದ ಪಂಚಜನಾದಿಶಬ್ದಗಳು ಬಹುಸಂಖ್ಯಾವಿಶಿಷ್ಟವಸ್ತುವನ್ನು ಹೇಳಿಕೊಡುವದಿಲ್ಲ ಕಿಂತು ಪರಮಾತ್ಮವಾಚಕವಾಗಿವೆ ಎಂದು ಪ್ರತಿಪಾದಿಸಿದ್ದಾರೆ.

ಕಾರಣತ್ವೇನೇತ್ಯಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ಆತ್ಮನ ಆಕಾಶಃ ಸಂಭೂತಃ ಇತ್ಯಾದಿಶ್ರುತ್ಯುಕ್ತವಾದ ಆಕಾಶಶಬ್ದವು ಪರಮಾತ್ಮವಾಚಕವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

ಸಮಾಕರ್ಷಾಧಿಕರಣ - ೮ ಸೂತ್ರಗಳಿರುವ ಈ ಅಧಿಕರಣದಲ್ಲಿ ಪರಮಾತ್ಮನನ್ನು ಮುಖ್ಯವೃತ್ತಿಯಿಂದ ವಾಚಕವಾದ ಮಧ್ವಾದಿಶಬ್ದಗಳೇ ಮುಖ್ಯವೃತ್ತಿಯಿಂದ ಇತರ ಲೌಕಿಕವಸ್ತು ವಾಚಕವಾಗಿವೆ ಪ್ರತಿಪಾದಿಸಿದ್ದಾರೆ.

ಪ್ರಕೃತ್ಯಧಿಕರಣ - ೫ ಸೂತ್ರಗಳಿರುವ ಈ ಅಧಿಕರಣದಲ್ಲಿ ಪ್ರಕೃತಿ ಇತ್ಯಾದಿಶ್ರುತ್ಯುಕ್ತವಾದ ಸ್ತ್ರೀವಾಚಕಶಬ್ದಗಳು ಪರಮಾತ್ಮವಾಚಕವಾಗಿವೆ ಎಂದು ಪ್ರತಿಪಾದಿಸಿದ್ದಾರೆ.

ಏತೇನ ಸರ್ವೇವ್ಯಾಖ್ಯಾತಾಧಿಕರಣ - ೧ ಸೂತ್ರವಿರುವ ಈ ಅಧಿಕರಣದಲ್ಲಿ ನಿಷೇಧಬೋಧಕ ಅಸದ್ ಅಭಾವ ಶೂನ್ಯ ಇತ್ಯಾದಿಶ್ರುತ್ಯುಕ್ತವಾದ ಶಬ್ದಗಳು ಪರಮಾತ್ಮವಾಚಕವಾಗಿವೆ ಎಂದು ಪ್ರತಿಪಾದಿಸಿದ್ದಾರೆ.

ಇತಿ ಪ್ರಥಮೋऽಧ್ಯಾಯಃ

ಅಥ ದ್ವಿತೀಯೋऽಧ್ಯಾಯಃ

ಶ್ರೌತಸ್ಮೃತಿವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ ।
ನಿಷೇದ್ಧುಂ ಶಕ್ನುಯುರ್ವೇದಾ ನಿತ್ಯತ್ವಾತ್ ಮಾನಮುತ್ತಮಮ್ ॥೧॥

ಶ್ಲೋಕಾರ್ಥ - ಶ್ರೌತಸ್ಮೃತಿವಿರುದ್ಧತ್ವಾತ್ - ಶ್ರುತ್ಯನುಸಾರಿಯಾದ ಪರಮಾಪ್ತನಾದ ವಿಷ್ಣುವಿನಿಂದ ಪ್ರಣೀತವಾದ ಪಂಚರಾತ್ರಾದಿಸ್ಮೃತಿಗಳಿಗೆ, ವಿರುದ್ಧತ್ವಾತ್ - ವಿರುದ್ಧವಾದುದರಿಂದ, ಸ್ಮೃತಯಃ - ವಿಪ್ರಲಂಭಾದಿದೋಷಯುಕ್ತವಾದ ರುದ್ರಪ್ರಣೀತಪಾಶುಪತಾದಿಸ್ಮೃತಿಗಳು ಹರೇಃ - ಶ್ರೀನಾರಾಯಣನ, ಗುಣಾನ್- ಸರ್ವೋತ್ತಮತ್ವ, ಸ್ವಾತಂತ್ರ್ಯಾದಿ ಗುಣಗಳನ್ನು , ನಿಷೇದ್ಧುಂ - ಅಲ್ಲಗಳೆಯಲು ನ ಶಕ್ನುಯುಃ - ಸಮರ್ಥವಾಗಲಾರವು. (ಏಕೆಂದರೆ) ವೇದಾಃ - ವೇದಗಳು ಮತ್ತು ವೇದಾನುಸಾರಿ ಪಂಚರಾತ್ರಾದಿಗಳು, ನಿತ್ಯತ್ವಾತ್ - ಅಪೌರುಷೇಯವಾಗಿರುವದರಿಂದ, ಮತ್ತು ಅಪೌರುಷೇಯ ವೇದಾನುಸಾರಿಯಾದ್ದರಿಂದ, ಉತ್ತಮಂ ಮಾನಮ್ - ಉತ್ತಮವಾದ ಪ್ರಮಾಣವು.

ಅಧಿಕರಣ ಸಂಗ್ರಹ - ಶ್ರೌತಸ್ಮೃತಿವಿರುದ್ಧತ್ವಾತ್ - ಸ್ಮೃತ್ಯಧಿಕರಣಮ್. ವೇದಾಃ ನಿತ್ಯತ್ವಾತ್ ಮಾನಮುತ್ತಮಮ್ - ನ ವಿಲಕ್ಷಣತ್ವಾಧಿಕರಣಮ್.

ಸ್ಮೃತ್ಯಧಿಕರಣ - ೩ ಸೂತ್ರಗಳಿರುವ ಈ ಅಧಿಕರಣದಲ್ಲಿ ಯುಕ್ತಿಸಮಯಾದಿರೂಪವಾದ ಅಶ್ರೌತಪಾಶುಪತಾದಿಸ್ಮೃತಿಗಳ ವಿರೋಧಪರಿಹಾರವನ್ನು ಮಾಡಿದ್ದಾರೆ.

ನ ವಿಲಕ್ಷಣತ್ವಾಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ನಿತ್ಯವಾದ ವೇದಗಳಿಗೆ ಯುಕ್ತಿವಿರೋಧವನ್ನು ಪರಿಹರಿಸಿ ಪ್ರಾಮಾಣ್ಯವನ್ನು ಪ್ರತಿಪಾದಿಸಿದ್ದಾರೆ.

ದೇವತಾವಚನಾದಾಪೋ ವದಂತೀತ್ಯಾದಿಕಂ ವಚಃ ।
ನಾಯುಕ್ತವಾದ್ಯಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ॥೨॥

ಶ್ಲೋಕಾರ್ಥ - ಆಪಃ ವದಂತಿ - ನೀರು ಮಾತಾಡಿತು ಇತ್ಯಾದಿಕಂ ವಚಃ - ಇವೇ ಮೊದಲಾದ ಅನುಭವವಿರುದ್ಧವಾದ ವೇದವಾಕ್ಯಗಳು, ದೇವತಾವಚನಾತ್ - ಆಯಾ ಪದಾರ್ಥಗಳಲ್ಲಿರುವ ಅಭಿಮಾನಿದೇವತೆಗಳು ಮಾತನಾಡಿದರು ಎಂಬರ್ಥದಲ್ಲಿ ನ ಅಯುಕ್ತವಾದಿ - ಯುಕ್ತಿವಿರುದ್ಧವಾಗುವದಿಲ್ಲ. ಅಸತ್ - ತ್ರಿಕಾಲದಲ್ಲಿಯೂ ಇಲ್ಲದ ಶಶವಿಷಾಣ, ಕ್ವಚಿತ್- ಯಾವ ಕಾರ್ಯಕ್ಕೂ, ಕಾರಣಂ - ಕಾರಣತ್ವೇನ, ನೈವ ದೃಶ್ಯತೆ - ಕಾಣುವದಿಲ್ಲ

ಅಧಿಕರಣ ಸಂಗ್ರಹ - ದೇವತಾವಚನಾತ್ - ಅಭಿಮಾನ್ಯಧಿಕರಣಮ್. ಅಸನ್ನೈವ ಕಾರಣಂ ದೃಶ್ಯತೇ - ಅಸದಧಿಕರಣಮ್.

ಅಭಿಮಾನ್ಯಧಿಕರಣ - ೨ ಸೂತ್ರಗಳಿರುವ ಈ ಅಧಿಕರಣದಲ್ಲಿ ಮೃದಬ್ರವೀತ್ ಇತ್ಯಾದಿ ವೇದವಾಕ್ಯಗಳಲ್ಲಿ ಮೃದಾದಿಶಬ್ದಗಳಿಂದ ಅಭಿಮಾನಿ ದೇವತೆಗಳನ್ನು ಸ್ವೀಕರಿಸಿ ಆಪಾತತಃ ತೋರುವ ಯುಕ್ತಿವಿರೋಧವನ್ನು ಪರಿಹರಿಸಿ ಪ್ರತಿಪಾದಿಸಿದ್ದಾರೆ.

ಅಸದಧಿಕರಣ - ೬ಸೂತ್ರಗಳಿರುವ ಈ ಅಧಿಕರಣದಲ್ಲಿ ನಿಷೇಧಬುದ್ಧಿಮಾತ್ರವಿಷಯವಾದ ಪ್ರಾಗಭಾವಕ್ಕೆ ಕರ್ತೃತ್ವಸಾಧಕಯುಕ್ತಿಗಳವಿರೋಧ ತೋರಿಸಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸಿದ್ದಾರೆ

ಅಸಜ್ಜೀವಪ್ರಧಾನಾದಿಶಬ್ದಾ ಬ್ರಹ್ಮೈವ ನಾಪರಮ್ ।
ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ।
ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾತ್ ನಾಯುಕ್ತಂ ತದ್ವದೇತ್ ಶ್ರುತಿಃ ॥೩॥

ಶ್ಲೋಕಾರ್ಥ - ಅಸಜ್ಜೀವಪ್ರಧಾನಾದಿ ಶಬ್ದಾಃ - ವೇದದಲ್ಲಿ ಬರುವ ಅಸತ್, ಜೀವ, ಪ್ರಧಾನ ಮೊದಲಾದ ಶಬ್ದಗಳು, ಬ್ರಹ್ಮೈವ - ಪರಬ್ರಹ್ಮನಾದ ನಾರಾಯಣನನ್ನೇ, ಕಾರಣತ್ವೇನ - ಇಡಿಯ ಜಗತ್ತಿನ ಕಾರಣನೆಂದು; ವದಂತಿ - ಹೇಳುತ್ತವೆ. ಅಪರಮ್ - ನಾರಾಯಣನನ್ನು ಬಿಟ್ಟು ಬೇರೆಯವರನ್ನು ಕ್ವಾಪಿ - ಯಾವ ಕಾರ್ಯದಲ್ಲೂ ಕಾರಣತ್ವೇನ - ಕಾರಣವೆಂದು, ನ ವದಂತಿ - ಹೇಳುವದಿಲ್ಲ (ಯತಃ) - ಯಾವ ಕಾರಣ, ಹರಿಃ - ಶ್ರೀನಾರಾಯಣನು, ಸ್ವಾತಂತ್ರ್ಯಾತ್ - ಸ್ವತಂತ್ರನಾದದ್ದರಿಂದ, ಸರ್ವಕರ್ತೃತ್ವಾತ್ - ಇಡಿಯ ಜಗತ್ತಿನ ಕರ್ತೃನಾದ ಕಾರಣ, ಪೂರ್ಣಗುಣಃ - ಗುಣಪೂರ್ಣನೆಂದು ಶ್ರುತಿಃ - ವೇದವು, (ವದತಿ) - ಹೇಳುತ್ತದೆ . (ಅತಃ) -ಆದಕಾರಣ, ಶ್ರುತಿಃ - ವೇದವು ಅಯುಕ್ತಂ - ಯುಕ್ತಿವಿರುದ್ಧವಾದ, ತತ್ - ನೀರು ಮೊದಲಾದ ಜಡ ಪದಾರ್ಥಗಳು ಮಾತನಾಡುತ್ತವೆ ಎನ್ನುವದನ್ನು , ನ ವದೇತ್ - ಹೇಳುವದಿಲ್ಲ.

ಅಧಿಕರಣ ಸಂಗ್ರಹ - ಗುಣಪೂರ್ಣಃ ಹರಿಃ - ಭೋಕ್ತ್ರಧಿಕರಣಮ್. ಸ್ವಾತಂತ್ರ್ಯಾತ್ - ಆರಂಭಣಾಧಿ ಕರಣಮ್. ಅಸಜ್ಜೀವಪ್ರಧಾನಾದಿಶಬ್ದಾಃ - ಇತರವ್ಯಪದೇಶಾಧಿಕರಣಮ್. ಪೂರ್ಣಗುಣಃ - ಶಬ್ದಮೂಲತ್ವಾಧಿ

